ನೆಹರೂ ಬಾಲ ಪುಸ್ತಕಾಲಯ

# ಭಾರತದ ಧೀರ ಕಿಶೋರರು


ಸಿಗ್ರುನ್ ಶ್ರೀವಾಸ್ತವ

ಚಿತ್ರಗಳು
ರವಿ ಪರಾಂಜಪೆ

ಅನುವಾದ
ನೀ. ಕೃ. ರಾಮಶೇಷನ್





ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ವಿಷಯಾನುಕ್ರಮಣಿಕೆ



# ಹೆಬ್ಬಾವಿನೊಡನೆ ಸೆಣಸಾಟ

ನಿರ್ಮಲಳಿಗೆ ಸಯಲ್ ಲಹ್ನುಭಾಯ್ ಭೋಯಳನ್ನು ಕಂಡರೆ ಸ್ವಲ್ಪವೂ ಇಷ್ಟವಿರಲಿಲ್ಲ. ಹಳ್ಳಿಯವರು ಸಯಲಳ ತಾಯಿ ಕಲ್ಗಿಬೆನ್‌ಳ ಬಳಿ, "ನಿನ್ನ ದೊಡ್ಡ ಮಗಳ ಮೇಲೊಂದು ಕಣ್ಣಿರಲಿ ಕಲ್ಗಿಬೆನ್ ! ಅವಳು ನಿಜಕ್ಕೂ ಸುಂದರಿಯೆ. ಶೀಘ್ರದಲ್ಲೆ ಅವಳು ತನ್ನ ಮೋಹಕ ನಗೆಯಿಂದ ನಮ್ಮೂರಿನ ತರುಣರ ತಲೆತಿರುಗಿಸುತ್ತಾಳೆ, ಎಚ್ಚರ !" ಎಂದೇಕೆ ಹೇಳುತ್ತಾರೆ ಎಂಬುದೆ ನಿರ್ಮಲಳಿಗೆ ತಿಳಿಯದು.

"ಮೋಹಕನಗೆಯಂತೆ," ನಿರ್ಮಲ ಕೋಪದಿಂದಲೆ ಗೊಣಗಿಕೊಳ್ಳುತ್ತ ತನ್ನಲ್ಲೆ ಅಂದುಕೊಂಡಳು, "ಅದೊಂದು ಹಲ್ಲು ಕಿರಿಯುವಿಕೆಯಷ್ಟೆ." ಆದರೆ, ಸಯಲ್ ಲಹ್ನು ಭಾಯ್ ಮನಮೋಹಕ ನಗೆ ನಗುತ್ತಿದ್ದಳೆಂಬುದನ್ನು ಅವಳ ಮನಸ್ಸು ಹೇಳುತ್ತಿತ್ತು. ಆ ನಗು, ಇದ್ದಕ್ಕಿದ್ದಂತೆ ಸಯಲಳ ಅಂಡಾಕಾರದ ಮುಖದಲ್ಲಿ ಕಾಣಿಸಿಕೊಂಡು ಅವಳ ಮುಖ ಅರಳುತ್ತಿತ್ತು, ಕಣ್ಣುಗಳು ಹೊಳೆಯುತ್ತಿದ್ದವು. ನಕ್ಕಾಗಲಂತೂ ಅವಳ ಪುಟ್ಟ ಚಪ್ಪಟೆ ಮೂಗು ಸ್ವಲ್ಪ ಸುಕ್ಕಾಗಿ, ಮೃದುವಾದ ಎರಡು ಕೆನ್ನೆಗಳಲ್ಲೂ ಪುಟ್ಟ ಕುಳಿಗಳು ಮೂಡಿ, ಅವಳಿನ್ನೂ ಚೆನ್ನಾಗಿ ಕಾಣಿಸುತ್ತಿದ್ದಳು. ಇದೆಲ್ಲವನ್ನೂ ನಿರ್ಮಲ ಬಲ್ಲಳು.

ಅವಳ ನಗು ತುಂಬ ಮೋಹಕವಾಗಿದ್ದಿರಬಹುದು. ಆದರೆ ಅವಳು ತೊಟ್ಟ ರಿಪೇರಿ ಮಾಡಿದ ರವಿಕೆ ಮತ್ತು ಮಾಸಿದ ಸೀರೆಗಳು ಖಂಡಿತಾ ಮೋಹಕವಾಗಿರಲಿಲ್ಲ. ಅವಳು ಎರಡು ಕೈಗಳಲ್ಲಿ ತೊಟ್ಟುಕೊಂಡಿದ್ದ ಮೂರು ಮೂರು ತೆಳುವಾದ ದಂತದ ಬಳೆಗಳನ್ನಂತೂ ನಿರ್ಮಲಳ ಹೊಳೆಯುತ್ತಿದ್ದ ಬಳೆಗೆ ಹೋಲಿಸುವುದೇ ಸಾಧ್ಯವಿಲ್ಲ. ನಿರ್ಮಲಳ ಬಳಿಯಿದ್ದ ಕತ್ತಿನ ಹಾರದಂತದು ಗುಜರಾತಿನ ಸಣ್ಣ ಆದಿವಾಸಿ ಗ್ರಾಮವಾದ ಬರ್ಕಾಡ್‌ನಲ್ಲಿ ಬೇರೆ ಯಾರ ಬಳಿಯೂ ಇರಲಿಲ್ಲ. ಹೊಳೆಯುವ ಕೆಂಪು ಮಣಿಗಳನ್ನು ಕೆಂಪು ತಂತಿಯಲ್ಲಿ ಪೋಣಿಸಿದ್ದ ಹಾರವದು. ಹೊಳೆಯಲ್ಲಿ ಬಟ್ಟೆಗಳನ್ನು ಒಗೆಯುತ್ತ ಮಾತಾಡುವಾಗ ಸಯಲ್ ಕೂಡ ನಿರ್ಮಲಳ ಹಾರವನ್ನು ಮನಸಾರೆ ಮೆಚ್ಚಿ ಪ್ರಶಂಸಿಸಿದ್ದಳು.

"ಒಹ್ಹೋ ! ಎಷ್ಟು ಚೆನ್ನಾಗಿದೆ ಇದು, ನಿರ್ಮಲ" ಎಂದ ಸಯಲ್ "ಹತ್ತಿರದಿಂದ ನೋಡುತ್ತೇನೆ" ಎಂದೂ ಕೇಳಿದ್ದಳು.

ಆದರೆ ಗೆಳತಿಯು ಮಾತಿಗೆ ಮನವೀಯದ ನಿರ್ಮಲ ಜಂಭದಿಂದ ತನ್ನ ಕೊರಳುಕೊಂಕಿಸಿ, ಬಟ್ಟೆಗಳನ್ನು ಬಂಡೆಗಲ್ಲಿನ ಮೇಲೆ ರಭಸದಿಂದ ಬಡಿಯುವುದನ್ನು ಮುಂದುವರೆಸಿದ್ದಳು.

"ಅಲ್ಲಿ ನೋಡು" ಸಯಲ್ ಇದ್ದಕ್ಕಿದ್ದಂತೆಯೆ ಹೇಳಿದಳು, "ಅಲ್ಲೊಂದು ಸಿಂಪಿಗ ಹಕ್ಕಿ."

"ಅದೇನೂ ಸಿಂಪಿಗ ಹಕ್ಕಿ ಅಲ್ಲ. ಗುಬ್ಬಚ್ಚಿ, ಅಷ್ಟೆ."

"ಅಲ್ಲ, ನಿರ್ಮಲ. ಈ ಹಕ್ಕಿಯ ಎದೆ ಹಳದಿ ಬಣ್ಣದ್ದಿದೆ. ಹಾಗಿದ್ದ ಮೇಲೆ ಅದು ಗುಬ್ಬಚ್ಚಿಯಂತೆ ಕಾಣುತ್ತೆ ಅಂತ ಹೇಗೆ ಹೇಳುತ್ತಿ ?"

ನಿರ್ಮಲ ಹಕ್ಕಿಯ ಕಡೆ ಇನ್ನೊಮ್ಮೆ ನೋಡಿದಳು. ನಿಜವೆ, ಅದು ಬೇರೆ ತರಹದ್ದೆ. ಎಂದಿನಂತೆಯೆ ಸಯಲ್ ಹೇಳಿದ್ದೆ ಸರಿ ! ನಿರ್ಮಲಳಿಗೆ ಸಯಲಳ ಈ ವರ್ತನೆಯೇ ಇಷ್ಟವಾಗುತ್ತಿರಲಿಲ್ಲ—ಅವಳು ಯಾವಾಗಲೂ ಸರಿಯಾಗಿಯೇ ಹೇಳುತ್ತಾಳೆ, ಅವಳು ತನಗೆ ಎಲ್ಲವೂ ತಿಳಿದಿದೆ ಎಂದು ಭಾವಿಸುತ್ತಾಳೆ. ಈ ಹಳ್ಳಿಯಲ್ಲಿ ಸಯಲಳಿಗೆ ಬುದ್ಧಿ ಹೇಳುವವರೆಂದರೆ ಒಬ್ಬರೇ ! ಅವರು ಪ್ರಾಥಮಿಕ ಶಾಲೆಯ ಉಪಾಧ್ಯಾಯರು. ಸಯಲಳಿಗೆ ಶಾಲೆ ಎಂದರೆ ತುಂಬ ಪ್ರೀತಿ. ಆದರ ನಿರ್ಮಲ ಶಾಲೆ ತಪ್ಪಿಸಿಕೊಂಡು ಹೊಲಗದ್ದೆಗಳಲ್ಲಿ ಸುತ್ತಾಡುವ ಅವಕಾಶವನ್ನು ಎಂದೂ ತಪ್ಪಿಸಿಕೊಳ್ಳುತ್ತಿರಲಿಲ್ಲ.

"ನಿರ್ಮಲ, ನಿರ್ಮಲ" ಗುಡಿಸಲೊಳಗಿಂದ ಅವಳ ತಾಯಿ ಕೂಗಿದಳು: "ಆಗಲೆ ಎಂಟು ಗಂಟೆಯಾಯಿತಮ್ಮ. ದನಗಳನ್ನು ಅಟ್ಟಿಕೊಂಡು ಹೋಗುವವರು ಯಾರೂ ಇಲ್ಲ. ಓಡು ಮಗು, ದನ ಹೊಡೆದುಕೊಂಡು ಹೋಗು. ಶಾಲೆಗೆ ಇನ್ನೊಂದು ದಿನ ಹೋಗುವಿಯಂತೆ."

ನಿರ್ಮಲ ಸಂತೋಷದಿಂದ ಕುಣಿದಾಡಿದಳು. ದನ ಅಟ್ಟಿಕೊಂಡು ಹೋಗುತ್ತ ಹಾಗೆಯೆ ಹಳ್ಳಿಯ ದಾರಿಯಲ್ಲಿ ನಡೆದಳು. ಊರಿನ ಕೊನೆಯಲ್ಲೊಂದು ಮಣ್ಣಿನ ಮುರುಕಲು ಗುಡಿಸಲು. ಗುಡಿಸಲಿನ ಬಾಗಿಲು ತೆರೆದಿತ್ತು. ಹಳೆಯ ಪಾತ್ರೆ ಅಲ್ಲಲ್ಲಿ ನೆಲದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಮೂರು ಬಡಕಲು ಕೋಳಿಗಳು ಅಕ್ಕಿ ಕಾಳು ಸಿಕ್ಕೀತೆ ಎಂದು ಹುಡುಕುತ್ತಿದ್ದುವು. ಗುಡಿಸಲ ಮುಂದೆ, ಸುಮಾರು ಒಂಬತ್ತು ವರ್ಷ ವಯಸ್ಸಿನ ಪುಟ್ಟ ಹುಡುಗಿ ಅಕ್ಕಿ ಆಯುತ್ತ ಕುಳಿತಿದ್ದಳು. "ವಿಜಯಕುಮಾರ, ಅಕ್ಕಿ ತಿನ್ನಬೇಡ. ನೀನೇನೂ ಹಕ್ಕಿಯಲ್ಲ." ಅಲ್ಲೆ ಇದ್ದ ಪುಟ್ಟ ಹುಡುಗನನ್ನು ಗದರಿದಳು. ಪುಟ್ಟ ಮಗು ಕಿಲಕಿಲನೆ ನಕ್ಕಿತು. ಹುಡುಗಿ, ಆ ವೇಳೆಗೆ ಬಂದ ನಿರ್ಮಲಳನ್ನು ನೋಡಿ, ನಕ್ಕಳು: "ಈವತ್ತು ದನಗಳನ್ನು ಎಲ್ಲಿಯವರೆಗೆ ಅಟ್ಟಿಕೊಂಡು ಹೋಗುವಿ, ನಿರ್ಮಲ ?" ಎಂದು ಕೊರಳು ಬಳುಕಿಸಿ ಕೇಳಿದಳು.

ನಿರ್ಮಲ ತನ್ನ ಭುಜ ಕುಣಿಸಿದಳಷ್ಟೆ. ತನ್ನ ಗೆಳತಿಯನ್ನು ಲಕ್ಷಿಸದೆ ಮುಂದೆ ನಡೆದಳು ಅವಳು.

"ಕೊರಕಲಿಗೆ ಹೋಗು. ಸಯಲ್ ಕೂಡ ನಮ್ಮ ದನಕರುಗಳನ್ನು ಅಲ್ಲಿಗೇ ಅಟ್ಟಿಕೊಂಡು ಹೋಗಿದ್ದಾಳೆ."

"ದನಕರುಗಳೋ !" ತನ್ನಲ್ಲೇ ಆಲೋಚಿಸಿದಳು. "ಕೈಹಿಡಿಯಷ್ಟು ಇರೊ ಮೇಕೆಗಳನ್ನು

ದನಗಳೆಂದು ಯಾರು ಕರೆಯಲಾದೀತು ?'' ಬಲವಂತದ ನಗೆಯನ್ನು ಮುಖದಲ್ಲಿ ತಂದುಕೊಂಡ ನಿರ್ಮಲ ಹೇಳಿದಳು: ''ಅಷ್ಟು ದೂರವೇ, ಮೀರಾಬಾಯಿ ?'' ದನಗಳ ಜತೆ ಕೆಲವು ಫರ್ಲಾಂಗು ದೂರ ನಡೆದ ನಂತರ, ಕೊರಕಲ ಕಡೆಯ ಕಾಲುದಾರಿಯನ್ನು ಬಿಟ್ಟು ಕಾಡಿನ ಕಡೆ ತಿರುಗಿದಳು. ಸ್ವಲ್ಪ ದೂರದಲ್ಲೇ ದನ ಮೇಯಲು ಅನುಕೂಲವಾದಂತೆ ಸಮತಲ ಭೂಮಿ ಎದುರಾಯಿತು.

ಕಾಡಿನಲ್ಲಿ ವಾತಾವರಣ ಬೆಚ್ಚಗೆ ಇತ್ತು. ಕೀಟಗಳು ಸದ್ದಿಲ್ಲದೆ ಅವಳ ತಲೆಯ ಸುತ್ತಾ ಹಾರುತ್ತಿದ್ದವು. ಆಗಾಗ್ಗೆ ಕೇಳಿ ಬರುವ ಹಕ್ಕಿಗಳ ಚಿಲಿಪಿಲಿ ಗಾಳಿಯಲ್ಲಿ ಪೂರಾ ತುಂಬಿ ಹೋಗಿತ್ತು. ಒಂದು ಅಳಿಲು ಅಲ್ಲಿದ್ದ ಅರಳಿ ಮರದ ಮೇಲೆ ಹತ್ತಿ ಓಡುತ್ತಿತ್ತು. ದೊಡ್ಡದೊಂದು ಕೊಂಬು ಕೊಕ್ಕಿನ ಹಕ್ಕಿ ತನ್ನ ರೆಕ್ಕೆಗಳನ್ನು ಬಡಿಯುತ್ತಾ ಹಾರಿಹೋಯಿತು. ಕಪ್ಪು-ಬಿಳುಪು ಬಣ್ಣದ ಅದರ ಗರಿಗಳಿಗಾಗಿ ನಿರ್ಮಲ ನೆಲದ ಮೇಲೆ ಹುಡುಕಾಡಿದಳು. ಒಂದೂ ಸಿಗಲಿಲ್ಲ. ನಿರಾಸೆಗೊಂಡ ನಿರ್ಮಲ ಅಲ್ಲೇ ನಿಂತಿದ್ದ ಸೋಮಾರಿ ಎಮ್ಮೆಯನ್ನು ಕೂಗಿ ಮುಂದಕ್ಕೆ ಅಟ್ಟಿದಳು.

ನಿರ್ಮಲ ಕೊನೆಗೂ ಸಮತಿಟ್ಟಿನ ಪ್ರದೇಶಕ್ಕೆ ಬಂದಳು. ಅಲ್ಲಿ ಬಂದ ಕೂಡಲೇ ಅವಳ ಕೋಪ ನೆತ್ತಿಗೇರಿತು. ಅವಳಿಗೆ ತುಂಬ ಪ್ರಿಯವಾಗಿದ್ದ, ಸೊಂಪಾಗಿ ಬೆಳೆದಿದ್ದ ಹುಲ್ಲಿನ ಹಾಸಿನ ಮೇಲೆ ಆಗಲೇ ಯಾರೋ ಆಲದ ಮರಕ್ಕೆ ಒರಗಿ ಕುಳಿತಿದ್ದರು. ಸಯಲ್ ಲಹ್ಲುಭಾಯ್ ಭೋಯ ! ಹನ್ನೆರಡು ವರ್ಷಕ್ಕೆ ಇನ್ನೂ ಚಿಕ್ಕವಳಾಗಿ ಕಾಣುತ್ತಿದ್ದ ಅವಳು ಕಾಲು ಮಡಚಿಕೊಂಡು ಕುಳಿತು ಅವಳ ಯೋಚನೆಯಲ್ಲೇ ಮುಳುಗಿದ್ದಳು. ತನ್ನ ಮಾಸಿದ ದಾವಣಿಯ ಒಂದು ಅಂಚನ್ನು ತಲೆಯ ಮೇಲೆ ಹಾಕಿಕೊಂಡಿದ್ದಳು. ತಲೆಗೂದಲನ್ನು ಬಾಚಿ ಮಧ್ಯ ಬೈತಲೆ ತೆಗೆದು ಗಂಟು ಕಟ್ಟಿದ್ದಳು.

ದನಗಳ ಕೊರಲಿನ ಗಂಟೆಗಳ ಮೆಲುದನಿ ಕೇಳಿದೊಡನೆ ಸಯಲ್ ತಲೆ ಎತ್ತಿ ನೋಡಿದಳು. ಆತ್ಮೀಯವಾದೊಂದು ಮುಗುಳುನಗೆ ಅವಳ ಮುಖದಲ್ಲಿ ಸುಳಿಯಿತು. ಕೈ ಬೀಸಿ ನಿರ್ಮಲಳನ್ನು ಕರೆದಳು. ''ನಿರ್ಮಲ ಬಾ ಇಲ್ಲಿ, ನೆರಳಿಗೆ.''

ಸಯಲಳ ಕರೆಯನ್ನು ನಿರ್ಲಕ್ಷಿಸಿದ ನಿರ್ಮಲ ''ನಾನು ಕೊರಕಲಿಗೆ ಹೋಗುತ್ತೇನೆ ಅಥವಾ ಬೇರೆಲ್ಲಾದರೂ ಹೋಗುತ್ತೇನೆ, ಅವಳಿಂದ ದೂರ'' ಎಂದು ಮನಸ್ಸಿನಲ್ಲೇ ಯೋಚಿಸಿದಳು.

''ಬಾ ನಿರ್ಮಲಾ. ನಾನು ನಿನಗೆ ಒಂದು ಒಳ್ಳೆಯ ವಸ್ತುವನ್ನು ತೋರಿಸುತ್ತೇನೆ'' ಎಂದು ಕೂಗಿದಳು.

ಒಳ್ಳೆಯದೇ ! ಸಯಲಳಿಗೆ ಆಸಕ್ತಿಯುತವಾದ ವಸ್ತುಗಳು ಏನು ಎಂಬುದು ನಿರ್ಮಲಳಿಗೆ ಗೊತ್ತು. ಅವು ಬೇಸರ ತರುವಂಥ ಶಾಲೆಯ ಹಾಗೆಯೇ ಇರುತ್ತವೆ. ಕೋಪದಿಂದ ಕಾಲು ಬೆರಳುಗಳನ್ನು ನೆಲದಲ್ಲಿ ಉಜ್ಜಲು ಪ್ರಾರಂಭಿಸಿದಳು ನಿರ್ಮಲ.

ದನಗಳು ಮೃದುವಾದ ಹಸಿರು ಹುಲ್ಲನ್ನು ಹುಡುಕಲಾರಂಭಿಸಿದವು. ನಿರ್ಮಲ ಸುತ್ತಲೂ ತನ್ನ ದೃಷ್ಟಿ ಬೀರಿದಳು. ಅಲ್ಪ ಸ್ವಲ್ಪ ನೆರಳು ಇದ್ದಂತೆ ಕಾಣುವ ಪೊದೆಗಳ ಕಡೆ ಅವಳ ಗಮನ ಹರಿಯಿತು. ಮಂಡಿಯುವರೆಗೆ ಬೆಳೆದಿದ್ದ ಆ ಪೊದೆಗಳ ಕಡೆ ಅವಳು ನಡೆದಳು.

“ಏಯ್, ನಿರ್ಮಲ ? ನೀನೇಕೆ ಇಲ್ಲಿ ಬರುವುದಿಲ್ಲ. ?”

“ಫ್ಫ್....” ಸಿಡಿಮಿಡಿಗುಟ್ಟಿದ ನಿರ್ಮಲ ಮೂಗು ಮುರಿದಳು.

“ಹಿಸ್ಸ್..... ಸ್ಸ್ಸ್ಸ್ಸ್.....”

ನಿರ್ಮಲಳಿಗೆ ರಕ್ತವೆ ಹೆಪ್ಪುಗಟ್ಟಿದಂತಾಯಿತು.

“ಹಿಸ್ಸ್..... ಸ್ಸ್ಸ್ಸ್ಸ್.....”

ಆ ಸದ್ದು ಅವಳನ್ನು ರಕ್ತಹೀನಳಂತೆ ಮಾಡಿ ನಡುಕ ಹುಟ್ಟಿಸಿತು. ಅವಳು ಮತ್ತೆ ನೋಡಿದಳು. ಅವಳಿಗೆ ಕಂಡಿದ್ದು ಕೋಪವನ್ನು ಸೂಚಿಸುತ್ತಿರುವ ಗುಂಡಗಿರುವ ಎರಡು ಕಣ್ಣುಗಳು —ಹಾವಿನ ಕಣ್ಣುಗಳು. ಅದು ಹನ್ನೆರಡು ಅಡಿಗಳಿಗೂ ದೊಡ್ಡದಾಗಿದ್ದ ಹೆಬ್ಬಾವು. ಹಸಿರು–ಬೂದು ಬಣ್ಣದ ಅದರ ಮೈಮೇಲೆಲ್ಲಾ ವಜ್ರದ ಮಾದರಿಯ ದಟ್ಟ ಕಂದುಬಣ್ಣದ ಮಚ್ಚೆಗಳು. ಹೊಟ್ಟೆಯ ಭಾಗ ಬೂದು ಬಣ್ಣದಿಂದ ಹೊಳೆಯುತ್ತಿದ್ದು ಹಳದಿ ಮತ್ತು ಕಂದು ಬಣ್ಣದ ಚುಕ್ಕೆಗಳಿದ್ದವು.

ನಿರ್ಮಲಳು ಗಾಬರಿಯಿಂದ ಬಾಯಿ ಮುಚ್ಚಿಕೊಂಡಳು. ಜೋರಾಗಿ ಕೂಗಿಕೊಳ್ಳಲು ಪ್ರಯತ್ನಿಸಿದಳು. ಆದರೆ ಶಬ್ದವೇ ಬರುತ್ತಿರಲಿಲ್ಲ. ಮಾಂತ್ರಿಕನ ವಶೀಕರಣಕ್ಕೆ ಒಳಪಟ್ಟವಳಂತೆ ಅದನ್ನೇ ನೋಡುತ್ತಾ ನಿಂತಳು.

ಥಟ್ಟನೆ ಹೆಬ್ಬಾವು ಜಿಗಿಯಿತು. ಮತ್ತೆ ಭಯಾನಕ ರೀತಿಯಲ್ಲಿ ಅದು ಬುಸುಗುಟ್ಟಿತು. ಅಷ್ಟು ಭಯಂಕರ ಪರಿಸ್ಥಿತಿಯನ್ನು ನಿರ್ಮಲ ತನ್ನ ಜೀವನದಲ್ಲಿ ಕಂಡಿರಲಿಲ್ಲ, ಕೇಳಿರಲಿಲ್ಲ. “ನನ್ನನ್ನು ಕಾಪಾಡಿ” ಎಂದು ಕೂಗಿಕೊಳ್ಳಬೇಕೆಂದು ಪ್ರಯತ್ನಿಸಿದಳು, ಓಡಲು ಪ್ರಯತ್ನಿಸಿದಳು. ಆದರೆ ಹೆಬ್ಬಾವು ಅವಳನ್ನು ಮೋಡಿ ಮಾಡಿ ತನ್ನ ವಶೀಕರಣದಲ್ಲಿ ಹಾಕಿಕೊಂಡಂತ್ತಿತ್ತು. ಮುದುಕಿ ಲಕ್ಷ್ಮಿಬಾಯಿ ಹೇಳುತ್ತಿದ್ದ ಮಾತುಗಳು ನಿಜವೆನಿಸಿತು ಅವಳಿಗೆ. ಹಾವು, ಮೊಸಳೆ, ದೊಡ್ಡ ದೊಡ್ಡ ಹಲ್ಲಿಗಳು ಜನರನ್ನು ವಶೀಕರಣಗೊಳಿಸುತ್ತವೆ ಎಂದು ಆ ಮುದುಕಿ ಹೇಳುತ್ತಿದ್ದಳು. ನಿಜ, ಹಾವುಗಳು ಜನರನ್ನು ದಿಗ್ಭ್ರಮೆಗೊಳಿಸುತ್ತವೆ !

ಇದ್ದಕ್ಕಿದ್ದಂತೆಯೆ ಆ ಸರೀಸೃಪದ ತಲೆ ಚಿಮ್ಮಿ ಮುಂದೆ ಬಂದಿತು. ಅದೇ ವೇಳೆಯಲ್ಲಿ ಅದು ತನ್ನ ಬಾಲವನ್ನು ಮೇಲೆತ್ತಿ, ಒಮ್ಮೆಲೇ ನಿರ್ಮಲಳ ಎರಡೂ ಮುಂಡಿಗಳ ಸುತ್ತ ಎರಡು ಸುತ್ತು ಹಾಕಿ ಬಿಗಿಯಾಗಿ ಸುತ್ತಿಕೊಂಡಿತು. ತನ್ನ ಶರೀರದ ಮೂಳೆಗಳೆಲ್ಲಾ ಜಜ್ಜಿ ಪುಡಿಪುಡಿಯಾಗುತ್ತಿವೆಯೇನೋ ಎಂದೆನ್ನಿಸಿತು ಅವಳಿಗೆ. ನೋವಿನಿಂದ ಜೋರಾಗಿ ಅರಚಿಕೊಂಡಳು. ಆದರೆ, ಅವಳಿಗೆ ನೋವಿಗಿಂತಲೂ ಹೆದರಿಕೆಯೆ ಹೆಚ್ಚಾಗಿತ್ತು. “ನಾನು ಸಾಯುವುದು ಖಂಡಿತ” ಎಂದು ಯೋಚಿಸಿದ ಅವಳು, ಮತ್ತೆ ಮತ್ತೆ ಬೊಬ್ಬೆಯಿಟ್ಟಳು: “ಅಯ್ಯೋ ! ಅಯ್ಯೋ ! ಯಾರಾದರೂ ಸಹಾಯಕ್ಕೆ ಬನ್ನಿ.... !”

ಅವಳು ಆ ಹೆಬ್ಬಾವನ್ನು ದೂರ ತಳ್ಳಬೇಕೆಂದುಕೊಂಡಳು. ಆದರೆ ಅದನ್ನ ಕೈಯಿಂದ ಮುಟ್ಟಲೂ ಅವಳಿಗೆ ಆಗದೆ ಹೋಯಿತು. ಯಾರೊ ಹಿಂದೆ ಹೇಳಿದ್ದು ಅವಳಿಗೆ ನೆನಪಿಗೆ ಬಂದಿತು. “ಹಾವನ್ನು

ಮುಟ್ಟಿದರೆ ಕುಷ್ಠರೋಗ ಬರುತ್ತದೆ.''. ಈ ಹೆಬ್ಬಾವಾದರೊ ಅವಳನ್ನು ಜೀವಸಹಿತ ನುಂಗಿಬಿಡುವಷ್ಟು ದೊಡ್ಡದಾಗಿತ್ತು. ಹೌದು, ಕೆಲವು ಹಾವುಗಳು ಹಾಗೆ ನುಂಗಿದ್ದು ಉಂಟೆಂದು ಲಕ್ಷ್ಮೀಬಾಯಿ ಹೇಳಿದ್ದಳು.

ಭೀತಿಯಿಂದ ಅಗಲವಾಗಿ ಬಿಟ್ಟ ಕಣ್ಣುಗಳಿಂದ ತಿರುಚಿಕೊಳ್ಳುತ್ತಿದ್ದ ಹಾವನ್ನೇ ದಿಟ್ಟಿಸಿದಳು. ಅದು ನಿರ್ಮಲಳ ಸೊಂಟದ ಸುತ್ತ ಇನ್ನೊಂದು ಸುತ್ತು ಹಾಕುವಷ್ಟರಲ್ಲಿ ಬಿದಿರು ಬೊಂಬಿನ ಏಟುಗಳು ಅದರ ಮೇಲೆ ಬೀಳಲಾರಂಭಿಸಿತು. ನಿರ್ಮಲಳನ್ನು ಮತ್ತೊಂದು ಸುತ್ತು ಹಾಕುವ ಹಾವಿನ ಕೆಲಸ ಅಲ್ಲಿಗೇ ನಿಂತಿತು.

ಸಯಲ್ ! ಸಯಲ್ ಬಂದಿದ್ದಳು.

ಹೆಬ್ಬಾವಿನ ಬೆನ್ನಿನ ಮೇಲೆ ಏಟಿನ ಸುರಿಮಳೆ ಬೀಳುತ್ತಿತ್ತು. ಇದರಿಂದ ಹಾವು ಹೆದರಿ ನಡುಗಿದರೂ ತನ್ನ ಬಿಗಿತವನ್ನು ಸಡಿಲಗೊಳಿಸಲಿಲ್ಲ.

"ಸಯಲ್, ಸಯಲ್ !" ನಿರ್ಮಲ ಚೀರಿದಳು. "ನಾನು ಸಾಯುತ್ತಿದ್ದೇನೆ."

"ಇಲ್ಲ ನಿರ್ಮಲ, ನೀನು ಸಾಯುವುದಿಲ್ಲ" ಎಂದ ಸಯಲ್ ನಿರ್ಮಲಳನ್ನು ಸುತ್ತಿಕೊಂಡಿದ್ದ ಹಾವನ್ನು ಬೊಂಬಿನಿಂದ ಬಡಿಯುತ್ತ ಸಾಯಿಸಲು ಪ್ರಯತ್ನಿಸಿದಳು.

"ಹಾವಿನ ವಿಷ ನನಗೆ ಗೊತ್ತಾಗುತ್ತಿದೆ" ಎಂದು ನಿರ್ಮಲ ಕೂಗಿದಳು.

"ಇದೊಂದು ಹೆಬ್ಬಾವು ನಿರ್ಮಲ" ಎಂದ ಸಯಲ್ "ಅದೇನೂ ವಿಷದ ಹಾವಲ್ಲ" ಎಂದಳು.

"ನನಗೆ ಅಲ್ಲಾಡಲೂ ಕೂಡ ಆಗುತ್ತಿಲ್ಲ."

"ನೀನು ತುಂಬ ಹೆದರಿದ್ದೀಯ. ಆದ್ದರಿಂದಲೇ ನಿನಗೆ ಅಲ್ಲಾಡಲು ಸಾಧ್ಯವಾಗಿಲ್ಲ. ನಾನು ನಿನಗೆ ಸಹಾಯ ಮಾಡುತ್ತೇನೆ."

ಬೊಂಬಿನ ಏಟು ಹಾವಿನ ಗಟ್ಟಿ ಮೈಗೆ ಏನೂ ಪ್ರಯೋಜನವಾಗಲಿಲ್ಲ. ಸಯಲ್ ಬೊಂಬನ್ನು



ಬಿಸಾಡಿ ತನ್ನ ಕೈಗಳಿಂದ ಸೆಣಸಾಡಲು ಪ್ರಾರಂಭಿಸಿದಳು. ಅದರ ದವಡೆಗಳನ್ನು ಹಿಡಿದು ಅದರ ಬಾಯಿ ತೆಗೆಯಲು ಪ್ರಯತ್ನಿಸಿದಳು.

"ಅದು ನಿನ್ನನ್ನು ಕಚ್ಚಿಬಿಡುತ್ತದೆ, ಸಯಲ್."

ತನ್ನ ಎಲ್ಲಾ ಶಕ್ತಿಯನ್ನೂ ಒಂದುಗೂಡಿಸಲು ಬಲವಾಗಿ ತನ್ನ ಹಲ್ಲುಗಳನ್ನು ಕಚ್ಚಿದ್ದ ಸಯಲ್ "ಆದಾಗದು" ಎಂದಳು.

"ಅಯ್ಯಯ್ಯೋ... ಅದು ನನ್ನ ಕಾಲುಗಳನ್ನು ಮುರಿಯುತ್ತಿದೆ."

"ನಿರ್ಮಲ, ಸ್ವಲ್ಪ ತಾಳ್ಮೆ ತಂದುಕೋ."

ನಿರ್ಮಲ ಉಗುಳು ನುಂಗಿ ತೆಪ್ಪಗಾದಳು. ಹಾಗೇ ಸಯಲಳ ಬಿಗಿದ ಮುಖವನ್ನು ನೋಡಿದಳು. ಅವಳ ಕಂದುಬಣ್ಣದ ನಡುಗುತ್ತಿದ್ದ ಬಡಕಲು ಕೈಗಳು ಹಾವಿನ ಬಾಯನ್ನು ಹಿಗ್ಗಲಿಸಲು ಹೆಣಗುತ್ತಿದ್ದವು. ಹಲ್ಲು ಕಚ್ಚಿ ಸಯಲ್ ತನ್ನ ಕೈಯನ್ನು ಹಾವಿನ ಗಂಟಲಿಗೆ ತುರುಕುತ್ತಿದ್ದನ್ನು ನಿರ್ಮಲ ಗಮನಿಸಿದಳು. ಸಯಲ್‌ನ ಹಣೆಯ ಮೇಲೆ ಬೆವರಿನ ಹನಿಗಳು ಮೂಡಿದ್ದವು ಮತ್ತು ಅವಳ ಕೈಯಿಂದ ರಕ್ತ ತೊಟ್ಟಿಕ್ಕಲು ಪ್ರಾರಂಭಿಸಿತು. ರಕ್ತ ತನ್ನದೋ ಅಥವಾ ಸಯಲಳದೋ ?

ಹಾವು ರಭಸದಿಂದ ಒದ್ದಾಡಿತು. ಓಹ್, ಅದೆಷ್ಟು ಬಲಿಷ್ಠ! ಸಯಲಳು ಅದರ ವಿರುದ್ಧ ಹೋರಾಡಲು ಆಗುವುದಿಲ್ಲ. ನಾವಿಬ್ಬರೂ ಸಾಯುತ್ತೇವೆ.

ಆದರೆ ಹೆಬ್ಬಾವಿನ ದವಡೆ ಇದ್ದಕ್ಕಿದ್ದ ಹಾಗೆ ಬಿಡಿಸಿಕೊಂಡಿತು.

"ಕಾಲುಗಳನ್ನು ಬಿಡಿಸಿಕೋ, ಒದ್ದು ಬಿಡಿಸಿಕೋ" ಎಂದು ಸಯಲ್ ಕೂಗಿದಳು. ತನ್ನ ಎಲ್ಲಾ ಶಕ್ತಿಯನ್ನೂ ಒಂದುಗೂಡಿಸಿ ಹಾವಿನ ದವಡೆಯನ್ನು ಅವಳು ಹಿಡಿದಿದ್ದಳು.

ನಿರ್ಮಲ ತನ್ನ ಕಾಲುಗಳನ್ನು ಜಾಡಿಸಿ, ಹಾವಿನಂತೆಯೇ ಒದ್ದಾಡಿ ಅದರ ಹಿಡಿತದಿಂದ ಬಿಡಿಸಿಕೊಂಡು ಅಲ್ಲಿಂದ ಒಂದು ನೆಗೆತ ಹಾರಿದಳು. ಬಿಡುಗಡೆ! ಹಾವಿನ ಹಿಡಿತದಿಂದ ಅವಳು ಹೊರಬಂದಿದ್ದಳು.

ಆದರೆ ಪಕ್ಕದಲ್ಲಿ ಸೆಣಸಾಟ ಸಾಗಿಯೇ ಇತ್ತು. ಈಗ ಮತ್ತಷ್ಟು ತೀವ್ರವಾಗಿತ್ತು ಆ ಸೆಣಸಾಟ.

"ಓಡು, ಓಡು ನಿರ್ಮಲ, ನಿನ್ನನ್ನು ನೀನೇ ಈಗ ರಕ್ಷಿಸಿಕೋ" ಎಂದು ಸಯಲ್ ಕೂಗಿದಳು.

ನಿರ್ಮಲಳಿಗೆ ಓಡಲಾಗಲಿಲ್ಲ. ಅವಳು ನಿಲ್ಲಲೇಬೇಕಿತ್ತು. ಇದ್ದು ಸಹಾಯ ಮಾಡಬೇಕಿತ್ತು. ಆದರೆ ಹೇಗೆ ? ನಡುಗುವ ಭುಜಗಳಿಂದ ಸಯಲ್ ಹಾವಿನ ಮುಖವನ್ನು ದೂರ ಹಿಡಿಯುತ್ತಿದ್ದುದನ್ನು ನಿರ್ಮಲ ಅಸಾಹಯಕತೆಯಿಂದ ನೋಡುತ್ತಿದ್ದಳು.

ಹೆಬ್ಬಾವು ಭಯಾನಕ ರೀತಿಯಲ್ಲಿ ಒಂದು ಬಾರಿ "ಹಿಸ್ಸ....." ಎಂದಿತು. ಅದರ ತಲೆ ಚಿಲುಮೆಯಂತೆ ಮುನ್ನುಗ್ಗಿ ನೇರ ನಿರ್ಮಲಳ ಎದೆಯತ್ತ ಸರಿಯಿತು. ಹಾವಿನ ದವಡೆಗಳನ್ನು ಬಿಡಿಸಿ ಹಿಡಿದು ಸಯಲ್ ಹಿಂದಕ್ಕೆ ಬಾಗಿದಳು. ಅದರ ಕಡೆ ದೃಷ್ಟಿತಪ್ಪಿಸದೆ ಮತ್ತೆ ಕೂಗಿದಳು: "ನಿರ್ಮಲ ಓಡು, ಓಡು, ಓಡಿ ಹೋಗು."

"ಆದರೆ ಸಯಲ್, ಸಯಲ್" ನಿರ್ಮಲ ಚೀರಿದಳು. ಕ್ರೋಧದಿಂದ ಸಯಲಳ ಮೇಲೆ ಬೀಳುತ್ತಿದ್ದ ಹೆಬ್ಬಾವನ್ನು ನಿರ್ಮಲ ದಿಗ್ಭ್ರಾಂತಿಯಿಂದ ನೋಡುತ್ತಿದ್ದಳು.

"ಸಯಲ್, ಓ ! ಸಯಲ್ !"

"ಓಡು, ಓಡು" ಸಯಲಳ ಧ್ವನಿ ಕ್ಷೀಣಿಸುತ್ತಿತ್ತು.

ಅಸಹಾಯಕತೆಯ ಈ ಕ್ಷಣದಲ್ಲಿ ಅವಳಿಗೆ ಎಲ್ಲೂ ಇಲ್ಲದ ಶಕ್ತಿ ಬಂದಿತು. ತನ್ನೆಲ್ಲಾ ಶಕ್ತಿಯನ್ನೂ ಒಂದುಗೂಡಿಸಿ ಹಾವಿನ ತಲೆಯನ್ನು ಹಿಡಿದು ಒಂದೇ ಎಸೆತದಲ್ಲಿ ಅದನ್ನು ದೂರ ಬಿಸಾಡಿ, ಅಲ್ಲಿಂದ ಜಿಗಿದಳು. ತಕ್ಷಣ ಓಡಲು ಪ್ರಾರಂಭಿಸಿದಳು. ಸಯಲ್ ಈಗ ಹಾವಿನ ಹಿಡಿತಕ್ಕೆ ಸಿಗುವಂತಿರಲಿಲ್ಲ.

"ಓಡು ನಿರ್ಮಲ, ದನಗಳ ಬಳಿಗೆ ಓಡು."

ನಿರ್ಮಲ ವೇಗವಾಗಿ ಓಡಿದಳು. ಅವಳು ಹಿಂದೆ ನೋಡಲಿಲ್ಲ, ನೋಡುವುದು ಸಾಧ್ಯವೂ ಇರಲಿಲ್ಲ. ಓಡುತ್ತಲೆ ಇದ್ದಳು.

ಕೆಲವು ನಿಮಿಷಗಳ ನಂತರ ಸಯಲ್ ಅವಳನ್ನು ಸೇರಿಕೊಂಡಳು. ಅವಳ ಕೈ ಹಿಡಿದುಕೊಂಡು ಅವಳೊಡನೆ ಓಡಿದಳು. ಶಾಂತವಾಗಿ ಮೇಯುತ್ತಿದ್ದ ದನಕರುಗಳ ಬಳಿ ತಲುಪಿದಾಗಲೇ ಅವರು ಓಡುವುದನ್ನು ನಿಲ್ಲಿಸಿದ್ದು.

ಯಾವ ಮಾತೂ ಇಲ್ಲದೆ ಏದುಸಿರು ಬಿಡುತ್ತಾ ಒಬ್ಬರ ಮುಖವನ್ನು ಇನ್ನೊಬ್ಬರು ನೋಡಿದರು. ನಿರ್ಮಲಳ ಕಣ್ಣಿನಿಂದ ನೀರು ಹರಿಯಲಾರಂಭಿಸಿತು, ತುಟಿಗಳು ಕಂಪಿಸುತ್ತಿದ್ದವು. "ಅಳಬೇಡ" ಸಯಲ್ ಮೆಲುದನಿಯಲ್ಲಿ ಹೇಳಿದಳು "ನೀನು ಸರಿ ಹೋಗುತ್ತಿಯಾ".

"ಹೌದು. ಆದರೆ ಸಯಲ್ ಆ ಹಾವು ನನ್ನನ್ನು ಸಾಯಿಸಿಬಿಡುತ್ತಿತ್ತು. ನೀನು ಸಮಯಕ್ಕೆ...."

"ಸುಮ್ಮನಿರು. ಅದರ ಬಗ್ಗೆ ಮಾತನಾಡಬೇಡ. ಎಲ್ಲಾ ಈಗ ಸರಿಹೋಯಿತು."

ನಿರ್ಮಲ ಸಯಲಳನ್ನು ಮೊತ್ತಮೊದಲ ಬಾರಿಗೆ ನೋಡಿದಂತೆ ನೋಡುತ್ತಿದ್ದಳು. "ಸಯಲ್, ನಾನು ನನ್ನ ಕತ್ತಿನ ಸರವನ್ನು ನಿನಗೆ ಕೊಡಬೇಕು" ಎಂದು ಮೆಲುದನಿಯಲ್ಲಿ ಹೇಳಿದಳು.

"ಆದರೆ ಯಾಕೆ, ಯಾಕೆ ನಿರ್ಮಲ ? ನಾನು ನಿನ್ನ ಪರಿಸ್ಥಿತಿಯಲ್ಲಿದ್ದಿದ್ದರೆ ನೀನೂ ಹೀಗೆ ಸಹಾಯ ಮಾಡುತ್ತಿದ್ದೆ."

ನಿರ್ಮಲ ತಲೆಬಾಗಿಸಿ ಅವಳ ಪಾದಗಳನ್ನು ನೋಡುತ್ತಿದ್ದಳು. ಸ್ವಲ್ಪ ಸಮಯದ ನಂತರ ಹೇಳಿದಳು: "ನನಗೆ ಗೊತ್ತಿಲ್ಲ. ನನಗೆ ನಿಜವಾಗಲೂ ಗೊತ್ತಿಲ್ಲ."

ನಂತರ ತನ್ನ ನಡುಗುತ್ತಿರುವ ಬೆರಳುಗಳಿಂದ ತನ್ನ ಸರವನ್ನು ತೆಗೆದು "ದಯವಿಟ್ಟು ತೆಗೆದುಕೋ" ಎಂದು ಬೇಡಿಕೊಂಡಳು.

ಸಯಲ್ ಲಹ್ನುಭಾಯ್ ಭೋಯ ತನಗಿಂತ ಚಿಕ್ಕವಳಾದ ನಿರ್ಮಲಳ ಕಣ್ಣುಗಳನ್ನೇ ಬಹಳ ಹೊತ್ತು ನೋಡುತ್ತಲಿದ್ದಳು. ನಿಧಾನವಾಗಿ ಅವಳ ಮುಖದಲ್ಲಿ ಒಂದು ಮುಗುಳ್ನಗೆ ಕಾಣಿಸಿಕೊಂಡಿತು. "ತೆಗೆದುಕೊಳ್ಳುತ್ತೇನೆ." ನಿಧಾನವಾಗಿ ಅವಳು ಹೇಳಿದಳು, "ನಾನು ತೆಗೆದುಕೊಳ್ಳುತ್ತೇನೆ."

# ಒಂದು ಕ್ಷಣ ಸಮಯ

ಸ್ಕೂಲಿನ ಗಂಟೆ ಬಾರಿಸುವುದನ್ನೆ ಗೋವಿಂದನ್ ಕಾತುರತೆಯಿಂದ ಕಾಯುತ್ತಿದ್ದ. ಅವನಿಗೆ ಶಾಲೆ ಇಷ್ಟ ಇರಲಿಲ್ಲವೆಂದಲ್ಲ. ಅವನು ಶಾಲೆಯನ್ನು ತುಂಬಾ ಪ್ರೀತಿಸುತ್ತಿದ್ದ. ಇಂಗ್ಲಿಷ್ ಪಾಠಗಳನ್ನು ಹೇಳಿಕೊಡುತ್ತಿದ್ದ ಶಿಕ್ಷಕಿ ಶಿತ್ರಲೇಹ ಅವರು ಅವನಿಗೆ ಬಹಳ ಇಷ್ಟ.

ತಮಿಳುನಾಡಿನ ಕುರುಬರಪಲ್ಲಿ ಹೈಸ್ಕೂಲಿನಲ್ಲಿ ಗೋವಿಂದನ್ ಓದುತ್ತಿದ್ದನು. ಎಂಟನೇ ತರಗತಿಯ ವಿದ್ಯಾರ್ಥಿಯಾದ ಇವನಿಗೆ ಓದುವುದೆಂದರೆ ತುಂಬ ಆಸೆ. ಅಂತೆಯೇ ಹಳ್ಳಿಯ ಹೊರಾಂಗಣದಲ್ಲಿ ಸುತ್ತಾಡಿ ಹೊಸದೇನಾದರೂ ಕಂಡುಬಂದಲ್ಲಿ ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವುದೂ ಅವನ ಹವ್ಯಾಸವಾಗಿತ್ತು. ಪಲ್ಲವರ ಕಾಲದ ಪುರಾತನ ನಟರಾಜ ದೇವಾಲಯ ಈ ಹದಿಮೂರು ವರ್ಷದ ಬಾಲಕನಿಗೆ ಬಹಳ ಪ್ರಿಯವಾದ ಸ್ಥಳವಾಗಿತ್ತು. ಶಾಲೆಯನಂತರ ಗೆಳೆಯ ರವಿಯೊಡನೆ ಅವನು ಅಲ್ಲಿಗೆ ಹೋಗುತ್ತಿದ್ದ.

"ಗೋವಿಂದನ್." ಶಿತ್ರಲೇಹ ಅವರ ಧ್ವನಿ ಮೈಮರೆತಿದ್ದ ಗೋವಿಂದನನ್ನು ಎಬ್ಬಿಸಿತು. ಥಟ್ಟನೆ ಎದ್ದು ಕುಳಿತ ಗೋವಿಂದನ್ ತನಗೆ ಅರಿವಿಲ್ಲದೆ ತಲೆಕೂದಲನ್ನು ಸರಿಪಡಿಸಿಕೊಂಡ. ಉಪಾಧ್ಯಾಯರ ದೃಷ್ಟಿಗೆ ಸಿಕ್ಕಿಬಿದ್ದರಿಂದ ನಾಚಿ ಅವನ ಮುಖ ಕೆಂಪಾಗಿತ್ತು.

"ಏನು ಮೇಡಮ್ ?"

"ಈ ಪುಸ್ತಕಗಳನ್ನು ಕೊಂಡೊಯ್ದು ನಮ್ಮ ಮನೆಗೆ ತಲುಪಿಸಿಬಿಡು. ಇನ್ನೇನು ಕೆಲವೇ ನಿಮಿಷಗಳಲ್ಲಿ ಶಾಲೆ ಮುಗಿಯುವುದರಿಂದ ನೀನು ಈಗಲೆ ಹೊರಡಬಹುದು."

"ಹಾಗೇ ಆಗಲಿ ಮೇಡಮ್."

ಗೋವಿಂದನ್ ತನ್ನ ಕ್ಯಾನ್‌ವಾಸ್ ಚೀಲವನ್ನು ಕೈಗೆತ್ತಿಕೊಂಡ. ಬಾಗಿಲೆಡೆಗೆ ಹೋಗುವಾಗ ರವಿಯನ್ನು ಮುಟ್ಟಿಕೊಂಡು ಹೋದ, ಕಣ್ಣು ಮಿಟುಕಿಸಿ, ಏನೊ ಸನ್ನೆ ಮಾಡಿದ. ಎಂದಿನಂತೆಯೇ ಜಾನಕೀರಾಮನ ಎಳನೀರಿನ ಅಂಗಡಿಯ ಬಳಿ ಭೇಟಿಯಾಗುವುದೆಂದು ಅವನು ಸನ್ನೆ ಮಾಡಿದ್ದ.

ಆದರೆ, ಸೆಪ್ಟೆಂಬರ್ 3, 1979 ರಂದು ಗೋವಿಂದನ್ ಮತ್ತು ರವಿ ತಾವು ಯೋಜಿಸಿದ್ದಂತೆ ಭೇಟಿಯಾಗಲಿಲ್ಲ.

ಸ್ಕೂಲಿನಿಂದಾಚೆ ಬಂದ ಗೋವಿಂದನ್ ತನ್ನ ಕೈಯಲ್ಲಿ ಒಂದು ಹೊರೆ ಪುಸ್ತಕಗಳನ್ನು ಹಿಡಿದುಕೊಂಡೇ ಸುತ್ತಲೂ ಕಣ್ಣಾಡಿಸಿದ. ಮುಂದುಗಡೆ, ಕುರುಬರಪಲ್ಲಿಯ ದೊಡ್ಡ ಬೀದಿ ಹೊಲಗದ್ದೆಗಳ ಮತ್ತು ತೆಂಗಿನ ತೋಟಗಳ ಮಧ್ಯ ಅಂಕುಡೊಂಕಾಗಿ ಸಾಗಿತ್ತು. ಎಡ ಪಕ್ಕಕ್ಕೆ ಎರಡು ಮೈಲಿ ಆಚೆ ಹುಲ್ಲಿನ ಗುಡಿಸಲುಗಳು ಮಧ್ಯಾಹ್ನದ ಬಿಸಿಲಿನ ತಾಪದಲ್ಲಿ ಬೇಯುತ್ತಿದ್ದವು. ಅವುಗಳ ಬಳಿಯಲ್ಲೇ, ಹಳ್ಳಿಯ ಹೊರಗಡೆ, ನಟರಾಜ ದೇವಾಲಯದ ಅವಶೇಷವಿತ್ತು. ತಾಳೆಮರಗಳ ಹಾಗೂ ಹೊಲಗದ್ದೆಗಳ ಮಧ್ಯದಲ್ಲಿದ್ದ ಈ ಅವಶೇಷ ಹಿಂದಿನ ಕಾಲದ ಭವ್ಯತೆಯನ್ನು ಸಾರಿ ಹೇಳುವಂತಿತ್ತು.

ಶಾಲೆಗೆ ಎದುರಾಗಿ, ರಸ್ತೆಯ ಬಲಪಕ್ಕದಲ್ಲಿ, ಒಂದು ಲಾರಿ ನಿಂತಿತ್ತು. ಒಬ್ಬ ಮುದುಕ ನಡುಗುತ್ತಿರುವ ಕಾಲುಗಳ ಹೆಜ್ಜೆ ಹಾಕುತ್ತಾ ನಿಧಾನವಾಗಿ ಲಾರಿಯ ಹಿಂಬದಿಯಿಂದ ರಸ್ತೆಯ ಕಡೆ ಬಂದನು.

ಅವನು ಲಾರಿ ಚಾಲಕನೇ? ಸಾಧ್ಯವಿಲ್ಲ. ಅವನಿಗೆ ತುಂಬಾ ವಯಸ್ಸಾಗಿದೆ. ಅವನ ತಲೆ ಅಲ್ಲಾಡುವುದು, ಅವನ ಗುಳಿಬಿದ್ದಿರುವ ಕಣ್ಣುಗಳು, ಅವನು ಸೂರ್ಯನನ್ನೇ ನೋಡುತ್ತಿರುವುದು ಎಲ್ಲವೂ ವಿಚಿತ್ರವಾಗಿವೆ. ಮಾಸಿದ ಪಂಚೆ, ಅದನ್ನೂ ಸೊಂಟಕ್ಕೆ ಹೇಗೊ ಕಟ್ಟಿಕೊಂಡಿದ್ದ. ಕೈಯಲ್ಲಿದ್ದ ಕೋಲಿನಿಂದ ನೆಲವನ್ನು ಕುಟ್ಟುತ್ತಿದ್ದ. ನಡುಗುತ್ತಿರುವ ಬಲಗೈನಲ್ಲಿ ಒಂದು ಹಳೇ ಪಾತ್ರೆ.

"ಓಹ್! ಅವನೊಬ್ಬ ಭಿಕ್ಷುಕ." ಗೋವಿಂದನ್ ತನಗೆ ತಾನೇ ಹೇಳಿಕೊಂಡ. "ಅಯ್ಯೋ ದೇವರೆ, ಅವನು ಕುರುಡ!"

ಕನಿಕರದ ಬೆಚ್ಚನೆಯ ತರಂಗ ಅವನಲ್ಲಿ ಮನೆಮಾಡಿತು. ಗೋವಿಂದನ್, ತಕ್ಷಣ ತನ್ನ ಚಡ್ಡಿ ಜೇಬಿನೊಳಗಡೆ ಕೈ ತೂರಿಸಿ ತಡಕಿದ. ಏನೂ ಇರಲಿಲ್ಲ. ಬಿಳಿಯ ಹತ್ತಿ ಅಂಗಿಯ ಜೇಬುಗಳನ್ನೂ ನೋಡಿದ, ಒಂದು ಪೈಸೆಗಾಗಿ. ಆದರೆ ಪ್ರಯೋಜನ ಆಗಲಿಲ್ಲ. ಕೊಡಲು ಅವನ ಹತ್ತಿರ ಏನಾದರೂ ಇತ್ತೇನು? "ನನ್ನ ಸ್ಕೂಲ್ ಚೀಲದೊಳಗಡೆ ಏನಾದರೂ ಇರಬಹುದೇನೋ" ಎಂದು ಯೋಚಿಸಿದ ಗೋವಿಂದನ್.

ತನ್ನ ಪುಸ್ತಕದ ಪ್ರತಿ ಹಾಳೆಯನ್ನೂ ತಿರುವಿ ಹುಡುಕಲು ಅವನು ಬಾಗಿದ. ಥಟ್ಟನೆ ಮೋಟರ್ ಎಂಜಿನ್ನಿನ ಸದ್ದು ಅವನಿಗೆ ಕೇಳಿಸಿತು. ತಲೆ ಎತ್ತಿ ಖಾಲಿಯಾಗಿದ್ದ ದೊಡ್ಡ ರಸ್ತೆಯತ್ತ ನೋಡಿದ. ಒಂದು ಲಾರಿ ಪ್ರಚಂಡ ವೇಗದಲ್ಲಿ ಧಾವಿಸಿ ಬರುತ್ತಿತ್ತು.

"ಅದೇಕೆ ತನ್ನ ವೇಗವನ್ನು ಕಡಿಮೆ ಮಾಡುತ್ತಿಲ್ಲ" ಎಂದು ಅಚ್ಚರಿಗೊಂಡ ಗೋವಿಂದನ್. "ಮುಂದೆ ಇರುವ ಕಡಿದಾದ ತಿರುವಿನ ಕಾರಣ ಅಲ್ಲಿ ನಿಂತಿರುವ ಟ್ರಕ್ಕನ್ನೆ ಆಗಲಿ, ಅದರ ಹಿಂಬದಿಯಲ್ಲಿರುವ ಕುರುಡನನ್ನೆ ಆಗಲಿ ವೀಕ್ಷಿಸಲು ಖಂಡಿತ ಆಗುವುದಿಲ್ಲ...." ಗೋವಿಂದನ್ ಮನಸ್ಸಿನಲ್ಲಿಯೇ ತರ್ಕಿಸಿದ.

"ನೋಡಿಕೊಂಡು ನಡಿ" ಎಂದು ಮುದುಕನನ್ನು ಉದ್ದೇಶಿಸಿ ಕೂಗಿಕೊಂಡ. "ಲಾರಿಯೊಂದು



ನಿನ್ನ ಕಡೆಗೇ ಬರುತ್ತಿದೆ.'' ಆ ತಕ್ಷಣ ಅವನಿಗೆ ತನ್ನ ಬುದ್ಧಿಗೇಡಿತನ ತಿಳಿಯಿತು. ಆ ಮುದುಕ ಕುರುಡನಾಗಿದ್ದ. ಲಾರಿಯನ್ನು ನೋಡಲು ಅವನಿಗೆ ಸಾಧ್ಯವಿರಲಿಲ್ಲ. ಯಾವ ದಿಕ್ಕಿಗೆ ತಿರುಗಬೇಕು ಎನ್ನುವುದೂ ಅವನಿಗೆ ತಿಳಿಯುವುದಿಲ್ಲ.

ಕೂಗನ್ನು ಕೇಳಿದ ಕುರುಡು ಭಿಕ್ಷುಕ ಅಲ್ಲೆ ನಿಂತುಬಿಟ್ಟ. ಅವನ ಮುಖದಲ್ಲಿ ಗಾಬರಿ ಕಾಣಿಸಿಕೊಂಡಿತು. ಗೋವಿಂದನನ್ನು ನೋಡಲು ಸಾಧ್ಯವಿಲ್ಲದಿದ್ದರೂ ಅವನ ಕಡೆಗೇ ನೋಡುತ್ತ ನಿಂತ.

ಇಳಿಜಾರು ರಸ್ತೆಯಲ್ಲಿ ಲಾರಿ ವೇಗವಾಗಿ ಬರುತ್ತಿತ್ತು.

''ಓಹ್ ದೇವರೆ! ಈಗ ನಾನೇನಾದರೂ ಮಾಡಬೇಕು.'' ಗೋವಿಂದನ್ ತನ್ನ ಚೀಲ ಹಾಗೂ 8ನೇ ತರಗತಿಯ 38ಎಕ್ಸರ್‌ಸೈಜ್ ಪುಸ್ತಕಗಳೆಲ್ಲವನ್ನೂ ಅಲ್ಲೆ ಒಗೆದ ತನ್ನ ಎರಡೂ ತೋಳುಗಳನ್ನು ಮೇಲೆತ್ತಿ, ಕೈ ಬೀಸುತ್ತಾ ಜೋರಾಗಿ ಕೂಗಿದ: ''ನಿಲ್ಲಿಸಿ, ನಿಲ್ಲಿಸಿ... ಭಿಕ್ಷುಕ... ಭಿಕ್ಷುಕ...'' ನಂತರ ಭಿಕ್ಷುಕನ ಕಡೆ ತಿರುಗಿ ''ಓಡು... ಓಡು... ಅಪಾಯದಿಂದ ರಕ್ಷಿಸಿಕೊ'' ಎಂದು ಕೂಗಿಕೊಂಡ.

ಆದರೇನು? ಮುದುಕ ಓಡಲಾರನೆಂಬುದನ್ನು ಗೋವಿಂದನ್ ಬಲ್ಲ. ಇನ್ನು ಯಾರಾದರೂ ಅವನ ನೆರವಿಗೆ ಹೋಗಬೇಕೆಂದರೆ, ಗೋವಿಂದನ್ ಒಬ್ಬನೆ. ತಕ್ಷಣವೆ ಆತ ಕಾರ್ಯಪ್ರವೃತ್ತನಾಗಲೇಬೇಕಿತ್ತು! ಒಂದು ಕ್ಷಣ ಕೂಡ ತಡ ಮಾಡುವ ಹಾಗಿಲ್ಲ. ಒಂದೇ ಒಂದು ಕ್ಷಣ ತಡವಾದರೂ ಅಪಾಯ ತಪ್ಪಿದ್ದಲ್ಲ!

ಗೋವಿಂದನ್ ರಭಸದಿಂದ ಮುನ್ನುಗ್ಗಿದ. ಬರಿಗಾಲಲ್ಲಿ ಓಡಿ, ಶಾಲೆಯ ಅಂಗಳವನ್ನು ದಾಟಿ, ರಸ್ತೆಯ ತುದಿಗೋಡಿದ. ಅಲ್ಲೆ ನಿಂತು, ಕೈಯನ್ನು ಬೀಸಿ, ಕಿರುಚಿಕೊಂಡ: ''ನಿಲ್ಲಿಸು, ನಿಧಾನ ಮಾಡು.''

ವೇಗವಾಗಿ ಮುನ್ನುಗ್ಗುತ್ತಿದ್ದ ಲಾರಿಯ ಚಾಲಕ ಬೇಸರದಿಂದ ತಲೆಯಾಡಿಸಿ, ಯೋಚಿಸಿದ: ''ಈ ಹಳ್ಳಿ ಹುಡುಗ ಲಾರಿಯಲ್ಲಿ ಕುಳಿತು ಮನೆಗೆ ಹೋಗಲು ಬೆಟ್ಟು ತೋರಿಸಿ ಕೇಳುತ್ತಿದ್ದಾನೋ ಅಥವಾ ರಸ್ತೆ ದಾಟಲು ಸನ್ನೆ ಮಾಡುತ್ತಿದ್ದಾನೋ, ಎಲ್ಲಿಯ ಹುಚ್ಚ ಇವನು?''

ಡ್ರೈವರ್ ಹಾರನ್ ಮಾಡಿದ. ತನ್ನ ಕಾಲನ್ನು ಭದ್ರವಾಗಿ ಬ್ರೇಕ್ ಮೇಲೆ ಇಟ್ಟ. ''ಲಾರಿ

ಮಗುಚಿದರೆ ನನ್ನ ಕತೆ ಮುಗಿಯಿತು'' ಎಂದುಕೊಂಡ.

ಗೋವಿಂದನ್ ವೇಗದಿಂದ ಧಾವಿಸಿ, ಮುದುಕನ ಮೇಲೆ ಜಿಗಿದ. ಮುದುಕ ಕೂಗಿಕೊಂಡ. ಅವನ ಬೆತ್ತ ಮತ್ತು ಭಿಕ್ಷಾಪಾತ್ರೆ ಹಾರಿಹೋದವು! ಮುದುಕ ಮತ್ತು ಗೋವಿಂದನ್ ಇಬ್ಬರೂ ನೆಲದ ಮೇಲೆ ಬಿದ್ದರು.

ಕೆಳಗೆ ಬಿದ್ದಾಗ ಮುದುಕನಿಗೆ ಪೆಟ್ಟು ಬೀಳದಂತೆ ತನ್ನ ಎರಡೂ ತೋಳುಗಳಿಂದ ಮುದುಕನ ಶರೀರವನ್ನು ಬಳಸಿ ಹಿಡಿದಿದ್ದನು. ವಿಮಾನವೊಂದು ನೆಲಕ್ಕೆ ಅಪ್ಪಳಿಸುವ ಹಾಗೆ ಇಬ್ಬರೂ ರಸ್ತೆಯ ಒರಟು ನೆಲದ ಮೇಲೆ ಬಿದ್ದರು. ರಸ್ತೆಯ ಮೇಲಿನ ಜಲ್ಲಿಕಲ್ಲುಗಳಿಗೆ ಗೋವಿಂದನ ಮಂಡಿ ಬಡಿದು ಪೆಟ್ಟು ತಗುಲಿತು. ಕಾಲು ಮುಡಿಯ ಚರ್ಮ ಹರಿದು, ರಕ್ತ ಚಿಮ್ಮಿತು. ಅವನು ನೋವನ್ನು ಅನುಭವಿಸಲು ಕಣ್ಣು ಮುಚ್ಚಿಕೊಂಡ.

ಭರ್ರೆಂದು ರಭಸದಿಂದ ಧಾವಿಸಿದ ಲಾರಿ, ಕರ್ಕಶ ಧ್ವನಿಯಲ್ಲಿ ಕಿರುಚಿಕೊಂಡೇ ಇವರಿಬ್ಬರನ್ನೂ ಹಾದು ಹೋಯಿತು. ಕೆಲವೇ ಇಂಚುಗಳ ಅಂತರದಿಂದ ಇಬ್ಬರೂ ಪಾರಾದರು. ಸುಮಾರು ಇಪ್ಪತ್ತು ಗಜಗಳ ದೂರ ಸಾಗಿ ಲಾರಿ ನಿಂತಿತು. ''ದೇವರೇ, ದೇವರೇ'' ಎಂದು ಕೂಗಿದ ಭಿಕ್ಷುಕನಿಗೆ ಏನು ನಡೆಯುತ್ತಿದೆ ಎಂಬುದು ಅರ್ಥವಾಗಲಿಲ್ಲ.

ಗೋವಿಂದನ್ ಪ್ರಯಾಸದಿಂದ ಕಣ್ತೆರೆದು ನೋಡಿದ. ಮುದುಕನ ಮಬ್ಬುಮಬ್ಬಾದ, ನಿತ್ರಾಣವಾದ ಎರಡು ಜೊತೆ ಗುಳಿಬಿದ್ದ ಕಣ್ಣುಗಳನ್ನು ನೇರವಾಗಿ ನೋಡಿ ಹೇಳಿದ: ''ತಾತ, ನೀನು ಗಾಬರಿಪಡಬೇಡ, ನಾವು ಕ್ಷೇಮದಿಂದಿದ್ದೇವೆ...''

ಮುದುಕ ಕೆಮ್ಮುತ್ತಾ, ಗಂಟಲು ಸರಿಪಡಿಸಿಕೊಳ್ಳುತ್ತಾ ಹೇಳಿದ: ''ನನಗೇನೂ ಅರ್ಥವಾಗುತ್ತಿಲ್ಲ. ನನಗೆ... ನನಗೆ... ನನ್ನ ಕೋಲೆಲ್ಲಿ? ನನಗದು ಬೇಕು. ಅದಿಲ್ಲದೆ ನಾನು ಒಂದು ಹೆಜ್ಜೆ ಕೂಡ ಇಡಲಾಗದು.''

''ನಾನು ಅದನ್ನು ನಿನಗೆ ತೆಗೆದುಕೊಡುತ್ತೇನೆ ತಾತ'' ಎಂದ ಗೋವಿಂದನ್. ''ನಿಧಾನವಾಗಿ ಏಳು ಹೋಗೋಣ.'' ಅವನು ಬಾಗಿ, ಮುದುಕನನ್ನು ಹಾಗೆಯೇ ಎಬ್ಬಿಸಿದ. ತನ್ನ ಮೊಣಕೈಯೂರಿ, ಹಾಗೇ ತಬ್ಬಿ ಹಿಡಿದು, ನಿಲ್ಲಿಸಿ, ಮೆಲ್ಲನೆ ರಸ್ತೆಯ ಪಕ್ಕಕ್ಕೆ ಕರೆದೊಯ್ದ.

ತಕ್ಷಣ ಅವನ ಮಂಡಿಯಲ್ಲಿ ಅಸಾಧ್ಯ ನೋವು ಕಾಣಿಸಿಕೊಂಡಿತು. ಕೈಗಳು ನಡುಗುತ್ತಿದ್ದವು. ಕೆನ್ನೆಯ ಮೇಲೆ ರಕ್ತ ಕಾಣಿಸಿಕೊಂಡಿತ್ತು. ಕೈನ ಹಿಂಭಾಗದಿಂದ ಅದನ್ನು ಒರಸಿಕೊಂಡು, ಅಜ್ಜನ ಕೋಲೆಲ್ಲಿ ಎಂದು ಸುತ್ತಮುತ್ತಲೂ ದೃಷ್ಟಿ ಹಾಯಿಸಿದ.

ಆಗಲೇ ಲಾರಿಯ ಡ್ರೈವರ್ ಅವನ ಕಡೆಗೇ ಬರುತ್ತಿರುವುದು ಕಾಣಿಸಿತು. ಬಿಗಿಯಾದ ಮುಷ್ಟಿ ಅವನ ಕೋಪವನ್ನು ಸೂಚಿಸುತ್ತಿತ್ತು. ತಲೆ ಮೇಲಿಂದ ಜಾರುತ್ತ, ಹಣೆ ಮೇಲೆ ಇಳಿಬಿದ್ದ ಟೋಪಿಯ ಕೆಳಗೆ ಕೆಂಪಾದ ಕಣ್ಣು ಈ ಕೋಪವನ್ನು ಮತ್ತೂ ಹೆಚ್ಚಾಗಿ ಸೂಚಿಸುತ್ತಿತ್ತು. ಅವನು ಗೋವಿಂದನಿಗೆ ಅರ್ಥವಾಗದ ಯಾವುದೋ ಭಾಷೆಯಲ್ಲಿ ಕೂಗಾಡಿದ.

ಡ್ರೈವರನೇಕೆ ಅಷ್ಟು ಕೋಪದಿಂದಿದ್ದಾನೆ ? ಗೋವಿಂದನ್ ಮಾಡಿದ್ದೆಲ್ಲ ಕೇವಲ ಮುದುಕನ ಜೀವ ಉಳಿಸುವುದಕ್ಕಾಗಿ ಮಾತ್ರ. ಹಾಗೂ ಅದರಲ್ಲಿ ಮುದುಕನ ತಪ್ಪೂ ಇರಲಿಲ್ಲ. ಗೋವಿಂದನ್ ಮುದುಕನಿಗೆ ಅಡ್ಡಲಾಗಿ ನಿಂತ. "ಬೇಡಿ, ಬೇಡಿ.... ..ನಾನು ಎಲ್ಲವನ್ನೂ ತಮಗೆ ವಿವರಿಸುತ್ತೇನೆ...." ಕೂಗಿಕೊಂಡ ಗೋವಿಂದನ್.

ಡ್ರೈವರ್ ಹುಡುಗನ ಮಾತನ್ನು ಲಕ್ಷಿಸಲೇ ಇಲ್ಲ. ಮೂರೇ-ಮೂರು ದಾಪುಗಾಲು ಹೆಜ್ಜೆ ಇಟ್ಟ ಅವನು ಗೋವಿಂದನ ಬಳಿ ಬಂದಿದ್ದ. ಹಾಗೆಯೇ ಅವನನ್ನು ಬಿಗಿಯಾಗಿ ಹಿಡಿದು, ಒಮ್ಮೆಲೆ ಅಲ್ಲಾಡಿಸಿದ.

ಗೋವಿಂದನ್ ಕಣ್ಣೀರು ಕರೆದ, ಗೋಗರೆದು ಯಾಚಿಸಿದ: "ಅಯ್ಯ, ನೀವು ದಯವಿಟ್ಟು ನನ್ನ ಮಾತನ್ನು ಆಲಿಸಿರಿ..." ಆದರೆ ಅವನ ಭಾಷೆಯನ್ನೇ ಅರಿಯದ ಲಾರಿ ಚಾಲಕನಿಗೆ ಅವನು ಹೇಗೆ ತಾನೇ ವಿವರಿಸಬಲ್ಲ ?"

ಸಂಜ್ಞೆಗಳನ್ನು ಮಾಡುತ್ತಿದ್ದ ಗೋವಿಂದನ್ ತನಗೆ ಬರುತ್ತಿದ್ದ ಹರುಕು-ಮುರುಕು ಇಂಗ್ಲೀಷಿನಲ್ಲಿ ಕೂಗಿಕೊಂಡ: "ದಿ ಓಲ್ಡ್ ಮ್ಯಾನ್... ಬ್ಲೈಂಡ್. ನೊ ಸೀಯಿಂಗ್. ನೊ ಸೀಯಿಂಗ್ ಟ್ರಕ್."

ಡ್ರೈವರ್ ತನ್ನ ಮುಷ್ಟಿ ಬಿಗಿದು, ಹೆದರಿಸುವವನಂತೆ ಎತ್ತಿದ !

ಆದರೆ ಹೊಡೆತ ಮಾತ್ರ ಬೀಳಲೆ ಇಲ್ಲ.

ಇದ್ದಕ್ಕಿದ್ದಂತೆ ಜೋರಾಗಿ ಕೂಗುವ ಸದ್ದು: "ಹಿಡಿಯಿರಿ, ಹಿಡಿಯಿರಿ, ಆ ಲಾರಿಯ ಚಾಲಕನನ್ನು...." ಗಾಳಿಯೆಲ್ಲ ತುಂಬಿತು ಜನರ ಕೂಗು. ಜೇನುನೊಣಗಳ ಹಾಗೆ ಕುರುಬರ ಪಲ್ಲಿಯ ಹೈಸ್ಕೂಲಿನ ಹುಡುಗರೆಲ್ಲ ರಸ್ತೆಯ ಕಡೆ ನುಗ್ಗಿದರು. "ಹಿಡಿಯಿರಿ ಅವನನ್ನು, ಹಿಡಿಯಿರಿ. ನಮ್ಮ ಗೋವಿಂದನನ್ನು ಹಿಡಿದುಕೊಂಡಿದ್ದಾನೆ ಅವನು !"

ಬೆಚ್ಚಿ ಬಿದ್ದ ಲಾರಿಯ ಚಾಲಕ ಸುತ್ತಲೂ ನೋಡಿದ. ತನ್ನ ಕೈಮುಷ್ಟಿ ಅಲ್ಲಾಡಿಸುತ್ತ ಅರ್ಥವಾಗದ ಭಾಷೆಯಲ್ಲಿ ಏನೋ ಕೂಗಿಕೊಂಡ.

ಹುಡುಗರೂ ಒಟ್ಟಾಗಿ ಕೂಗಿದರು: "ಬಿಡಿ ಅವನನ್ನು...." "ಗೋವಿಂದನ್, ನೀನು ಭಯಪಡಬೇಡ. ನಾವೆಲ್ಲ ನಿನ್ನ ನೆರವಿಗೆಂದೆ ಬರುತ್ತಿದ್ದೇವೆ." ತೋಳದ ಮಂದೆಯಂತೆ ಹುಡುಗರೆಲ್ಲ ಡ್ರೈವರನ ಕಡೆ ಜಿಗಿದರು. ಇನ್ನೇನು, ಅವರು ಅವನನ್ನು ಅನಾಮತ್ ನೆಲಕ್ಕೆ ಉರುಳಿಸುತ್ತಿದ್ದರೇನೋ... ಅಷ್ಟರಲ್ಲಿಯೆ ಅವರಿಗೆ ಯಾರದೊ ಗಂಭೀರವಾದ ಸ್ವರ ಕೇಳಿಸಿತು: "ಮಕ್ಕಳೇ ಏನು ನಡಿಯುತ್ತಿದೆ ಅಲ್ಲಿ.... ? ರಸ್ತೆಯನ್ನು ಬಿಟ್ಟು ಪಕ್ಕಕ್ಕೆ ಬನ್ನಿ. ಇಲ್ಲಿ ಅಪಘಾತ ಸಂಭವಿಸಬಾರದು. ರಸ್ತೆಯನ್ನು ಬಿಟ್ಟು ಪಕ್ಕಕ್ಕೆ ಬನ್ನಿ, ಕೇಳಿಸಿತೇ ?"

ಒಲ್ಲದ ಮನಸ್ಸಿಂದ ಹುಡುಗರು ರಸ್ತೆಯ ಬದಿಗೆ ಬಂದರು. ಅಷ್ಟಾದರೂ ಕೋಪದಿಂದ ಬುಸುಗುಡುತ್ತ ಅವರು ಗೊಣಗಿಕೊಳ್ಳುತ್ತಲೆ ಇದ್ದರು: "ಹೇಡಿ. ಅವನನ್ನು ಜೈಲಿಗೆ ನೂಕಬೇಕು."

ಮುಖ್ಯೋಪಾಧ್ಯಾಯರು ಗೋವಿಂದನ್ ಹಾಗೂ ಡ್ರೈವರನನ್ನು ಸಂಜ್ಞೆ ಮಾಡಿ ದಾರಿಯ ಪಕ್ಕಕ್ಕೆ

ಕರೆದೊಯ್ದರು. ಶ್ರೀಮತಿ ಶಿತ್ರಲೇಹ ಮುದುಕನ ಶುಶ್ರೂಷೆಗೆ ತೊಡಗಿದರು.

"ಸರ್, ಸರ್..." ಗೋವಿಂದ ಬೇಗ ಬೇಗ ಹೇಳಿದ: "ನಾನು ಎಲ್ಲವನ್ನೂ ವಿವರಿಸುತ್ತೇನೆ. ಆ ಮುದುಕ ಇದ್ದನಲ್ಲ, ಅವನನ್ನು ಉಳಿಸಲೆಂದು ನಾನು ಎಲ್ಲವನ್ನೂ ಮಾಡಿದೆ. ಆದರೆ, ಡ್ರೈವರ್ ಅದೇಕೆ ಇಷ್ಟೊಂದು ಸಿಟ್ಟಾದರು ಎಂಬುದೆ ನನಗೆ ತಿಳಿಯದು."

ಮುಖ್ಯಾಪಾಧ್ಯಾಯರು ತಮ್ಮ ಕೈಯನ್ನು ಪ್ರೀತಿಯಿಂದ ಗೋವಿಂದನ ತಲೆಯ ಮೇಲಿಟ್ಟರು. "ನಾನು ಎಲ್ಲವನ್ನೂ ನೋಡಿದೆ. ನಿನ್ನ ಬಗ್ಗೆ ನಮಗೆಲ್ಲಾ ಹೆಮ್ಮೆ. ಒಂದೇ ಒಂದು ಕ್ಷಣ ತಡವಾಗಿದ್ದಿದ್ದರೆ ಮುದುಕ ಸಾಯುತ್ತಿದ್ದ. ಈಗ ನಾನು ಲಾರಿಯ ಚಾಲಕನೊಡನೆ ಮಾತನಾಡುತ್ತೇನೆ." ಇಷ್ಟು ಹೇಳಿ, ಇನ್ನೂ ಕೋಪದಿಂದ ಕುದಿಯುತ್ತಿದ್ದ ಲಾರಿ ಚಾಲಕನ ಕಡೆ ತಿರುಗಿದರು. "ನಿನಗೆ ಅಲ್ಪಸ್ವಲ್ಪ ಇಂಗ್ಲೀಷ್ ಬರುತ್ತದೆಯೇ" ಎಂದು ಮರ್ಯಾದೆಯಿಂದ ಕೇಳಿದರು.

"ಸ್ವಲ್ಪ ಬರುತ್ತದೆ. ನಿಮ್ಮ ಶಾಲೆಯ ವಿದ್ಯಾರ್ಥಿಗಳ..."

"ಸ್ವಲ್ಪ ತಡೆ. ಗೋವಿಂದನ್ ರಸ್ತೆಯಲ್ಲಿ ಅಡ್ಡ ಬಂದದ್ದು ಏತಕ್ಕೆ ಎಂಬುದನ್ನು ನಿನಗೆ ವಿವರಿಸುತ್ತೇನೆ."

ಹುಡುಗರೆಲ್ಲಾ ಈ ಇಬ್ಬರೂ ಮಾತನಾಡುತ್ತಿರುವುದನ್ನು ನೋಡುತ್ತಿದ್ದರು. ಡ್ರೈವರ್‌ನನ್ನು ದಿಟ್ಟಿಸಿ ನೋಡುತ್ತಿದ್ದಂತೆ ಅವನ ಮುಖ ಬಿಳುಚಿಕೊಂಡಿತು. "ಓ, ಹಾಗಾ" ಎಂದನು. ಆ ನಂತರ ಗೋವಿಂದನ ಕಡೆ ತಿರುಗಿ ತನ್ನ ಹರಕು ಮುರುಕು ಇಂಗ್ಲೀಷಿನಲ್ಲಿ ಹೇಳಿದನು: "ನನ್ನನ್ನು ಕ್ಷಮಿಸು, ನನ್ನನ್ನು ಕ್ಷಮಿಸಿಬಿಡು, ತಪ್ಪಾಯಿತು."

# ''ನಾನು ಉರಿಯುತ್ತಿದ್ದೇನೆ !''

ಪಾಟ್ನಾದ |ಸರ್ಕಾರೀ ಆಸ್ಪತ್ರೆಯ ಇಂಟೆನ್ಸೀವ್ ಕೇರ್ ಯೂನಿಟ್‌ನಲ್ಲಿ ಒಂದು ಬಿಳೀ ಕಟ್ಟಿನಂತೆ ಮೈಮೇಲೆಲ್ಲಾ ಬ್ಯಾಂಡೇಜ್ ಕಟ್ಟಿದ್ದ ಹೆಣ್ಣನ್ನು ಬಾಗಿ ನೋಡಿದಾಗ ತಾಯಿಯ ಕಣ್ಣೀರು ಒಂದೇ ಸಮನೆ ಸುರಿಯತೊಡಗಿತು. ಮೆಲು ಧ್ವನಿಯಲ್ಲಿ ಆಕೆ ಕರೆದಳು: ''ಸೋನಿಯ, ಮಗು ಸೋನಿಯ''

ಸೋನಿಯಾ ಸಿನ್ಹಾ ಉತ್ತರಿಸಲಿಲ್ಲ. ಅವಳು ಅಲ್ಲಾಡಲಿಲ್ಲ. ಅವಳಿನ್ನೂ ಬದುಕಿದ್ದಳೇ ? ಅವಳ ಹೃದಯ ಇನ್ನೂ ಬಡಿಯುತ್ತಿತ್ತೇನು ?

''ಡಾಕ್ಟರ್, ನನ್ನ ಮಗಳು ಸಾಯುತ್ತಿದ್ದಾಳೆಯೇ ?'' ಎಂದು ಗಾಬರಿಯಿಂದ ಆಕೆ ಕೇಳಿದಳು. ''ಡಾಕ್ಟರ್, ನರ್ಸ್, ದಯವಿಟ್ಟು ಅವಳನ್ನು ಉಳಿಸಿ'' ಎಂದು ಅಂಗಲಾಚಿದಳು.

ವೈದ್ಯ ಆಕೆಯ ಹೆಗಲಿನ ಮೇಲೆ ಕೈ ಇಟ್ಟು ಆಕೆಯನ್ನು ಕಿಟಕಿಯ ಬಳಿ ಕರೆದೊಯ್ದು ಹೇಳಿದ: ''ಶ್ರೀಮತಿ ಸಿನ್ಹಾ ನಾವು ಶಕ್ತಿಮೀರಿ ಪ್ರಯತ್ನ ಮಾಡುತ್ತಿದ್ದೇವೆ ನಮ್ಮ ಮೇಲೆ ವಿಶ್ವಾಸ ಇಟ್ಟುಕೊಳ್ಳಿ.''

''ನಾನದನ್ನು ಬಲ್ಲೆ ಡಾಕ್ಟರ್. ನಾನು ಇತ್ತೀಚೆಗೆ ನನ್ನ ಪತಿಯನ್ನು ಕಳೆದುಕೊಂಡಿದ್ದೇನೆ. ಈಗ ಇವಳನ್ನೂ ಕಳೆದುಕೊಳ್ಳಲು ಸಿದ್ಧಳಿಲ್ಲ. ದಯವಿಟ್ಟು ಅವಳ ಜೀವವನ್ನು ಉಳಿಸಿ.''

''ನಾವು ನಮ್ಮ ಕೈಲಾದುದನ್ನೆಲ್ಲಾ ಮಾಡುತ್ತಿದ್ದೇವೆ. ಅವಳಿಗೆ ಸುಟ್ಟ ಗಾಯ ಬಹಳವಾಗಿದೆ. ಅವಳ ಶಕ್ತಿ ಮತ್ತು ಬದುಕುವ ಅವಳ ಆಸೆಯ ಮೇಲೆ ಎಲ್ಲಾ ಅವಲಂಬಿಸಿದೆ'' ಎಂದು ವೈದ್ಯರು ಅವಳನ್ನು ಸಮಾಧಾನಪಡಿಸಿದರು.

''ಆದರೆ, ಡಾಕ್ಟರ್, ಅವಳು ಇಲ್ಲಿ ಸುಮಾರು ಮೂರು ವಾರಗಳಿಂದಲೂ ಇದ್ದಾಳಲ್ಲವೆ ?''

''ಅವಳು ಪೂರ್ಣ ಗುಣ ಹೊಂದಲು ಮೂರು ತಿಂಗಳು ಅಥವಾ ಇನ್ನೂ ಹೆಚ್ಚಿನ ಸಮಯ ಬೇಕಾಗಬಹುದು.''

''ಅಯ್ಯೋ, ದೇವರೇ.''

''ದುಃಖಿಸಬೇಡಿ ಶ್ರೀಮತಿ ಸಿನ್ಹಾ. ಸೋನಿಯ ಬಹಳ ಧೈರ್ಯವಂತೆ. ಹಾಗಿಲ್ಲಗಿದ್ದಲ್ಲಿ ಅವಳು ಈ ಕೆಲಸವನ್ನು ಮಾಡುತ್ತಿರಲಿಲ್ಲ.''

* * * *

ಸೋನಿಯಾ ಸಿನ್ಹಾ ತನ್ನ ಪುಟ್ಟ ತಮ್ಮ-ತಂಗಿಯರು ಮಲಗಿ ನಿದ್ರಿಸುತ್ತಿದ್ದುದನ್ನು ನೋಡಿದಳು. ಪುಟ್ಟ ತಮ್ಮ ಸನತ್, ಆಗತಾನೇ ಮಾತಾಡಲು ಕಲಿಯುತ್ತಿದ್ದ. ಶಾಲಿನಿ ಐದು ವರ್ಷದ ಪುಟ್ಟ ತಂಗಿ. ನಿದ್ರೆಯಲ್ಲಿಯೂ ಮೋಹಕವಾಗಿ ಕಾಣಿಸುತ್ತಿದ್ದಳು. ಶಾಲಿನಿಯುಟ್ಟಿದ್ದ ನಿರಿಗೆ–ನಿರಿಗೆಯ ರಾತ್ರಿಯ ಹತ್ತಿಯಂಗಿ ಮೇಲಕ್ಕೆ ಸರಿದಿತ್ತು. ಇದರಿಂದ ಫ್ಯಾನಿನ ಗಾಳಿ ಬೆನ್ನಿನ ಮೇಲೆ ಬೀಸುತ್ತಿತ್ತು.

"ಅವಳಿಗೆ ಹೊದಿಸಬೇಕು" ಎಂದು ಕೊಳ್ಳುವಾಗಲೇ ಅವಳು ಇವರುಗಳಿಂದ ದೂರ ಇರುವುದು ನೆನಪಾಯಿತು. ಅವಳು ಈ ದಿನಗಳಲ್ಲಿ ಪಾಟ್ನಾದಲ್ಲಿ ತನ್ನ ಅಜ್ಜ ಅಜ್ಜಿಯರ ಸಂಗಡವಿದ್ದು ಓದುತ್ತಿದ್ದಳು. ಅಲ್ಲಿ ಅವಳು ಸ್ಯೆಂಟ್ ಜೋಸೆಫ್ ಕಾನ್ವೆಂಟ್ ಶಾಲೆಗೆ ಹೋಗುತ್ತಿದ್ದಳು. ಕಾನ್ವೆಂಟಿನ ಉಪಾಧ್ಯಾಯರೆಲ್ಲರನ್ನೂ ಕಂಡರೆ ಸೋನಿಯಾಗೆ ತುಂಬ ಇಷ್ಟ. ಆದರೂ ಸಹ ಬಿಹಾರಿನ ಈ ಸಣ್ಣ ಊರಾದ ಅರ್ರಕ್‌ನಲ್ಲಿ ಓದಲು ಅವಳು ಇಷ್ಟಪಟ್ಟಿದ್ದಳು. ಅವಳ ತಂದೆ ಆ ಊರಿನ ಸರಕಾರಿ ಆಸ್ಪತ್ರೆಯಲ್ಲಿ ಮಕ್ಕಳ ತಜ್ಞವೈದ್ಯನಾಗಿದ್ದ. "ಜೀವನದ ಎಲ್ಲಾ ಅವಕಾಶಗಳಿಗೆ ಮಾರ್ಗವಾಗುವಂಥ ಒಳ್ಳೆಯ ವಿದ್ಯಾಭ್ಯಾಸ ನನ್ನ ಮಕ್ಕಳಿಗೆ ದೊರೆಯಬೇಕು" ಎಂಬುದು ಅವಳ ತಂದೆಯ ಬಯಕೆಯಾಗಿತ್ತು.

ಸೋನಿಯಾಳಿಗೆ ತಂದೆ ಹೇಳಿದ "ಜೀವನದ ಎಲ್ಲಾ ಅವಕಾಶಗಳು" ಎಂಬದರ ಅರ್ಥ ಸ್ವಲ್ಪವೂ ತಿಳಿದಿರಲಿಲ್ಲ. ಆದರೆ ಅವಳ ಹಿತಾಸಕ್ತಿಗಳೇ ತಾಯಿ ತಂದೆಯರ ಮುಖ್ಯ ಗಮನವಾಗಿತ್ತು ಎಂಬುದನ್ನು ಅವಳು ಅರಿತಿದ್ದಳು. ಆದ್ದರಿಂದಲೇ ಅವಳು ಕಷ್ಟಪಟ್ಟು ಓದಿದಳು. ಸೋನಿಯಾ ಮನೆಗೆ ಬರುತ್ತಿದ್ದದ್ದು ರಜೆಯ ದಿನಗಳು ಮತ್ತು ವಿಶೇಷ ದಿನಗಳಲ್ಲಿ. ಉದಾಹರಣೆಗೆ ನಿನ್ನೆ ಅವಳ ಹನ್ನೊಂದನೇ ವರ್ಷದ ಹುಟ್ಟುಹಬ್ಬವಾಗಿತ್ತು. ಓಹ್ ! ನೆನ್ನೆ ಅದೆಂಥ ಅದ್ಭುತ ದಿನ ಆಗಿತ್ತು ! ಅವಳ ಎಲ್ಲ ಹಳೆಯ ಸ್ನೇಹಿತರು, ಚಿಕ್ಕಪ್ಪ-ಚಿಕ್ಕಮ್ಮಂದಿರು, ಎಲ್ಲಾ ಬಂಧು-ಬಳಗ ಎಲ್ಲರೂ ಬಂದಿದ್ದರು. ಹೊಸ ಫ್ರಾಕನ್ನು ಸೋನಿಯಾ ಧರಿಸಿದ್ದಳು. ತೆಳು ನೀಲಿಬಣ್ಣ; ಅದಕ್ಕೆ ಸರಿಗೆ ಹಾಕಿದ ಬಿಳಿಯ ಕಸೂತಿ. ಬಿಲ್ಲಿನಂಥ ಕಮಾನು ಮತ್ತು ಬಿಳಿಯ ರಿಬ್ಬನ್ ಅವಳ ಕಪ್ಪು ಕೂದಲನ್ನು ಕಟ್ಟಿಹಿಡಿದಿದ್ದವು. ಚಾಕೊಲೇಟ್ ಬಣ್ಣದ ಹುಟ್ಟುಹಬ್ಬದ ಕೇಕ್ ಮೇಲೆ ಬೆಳಗುತ್ತಿದ್ದ ಹನ್ನೊಂದು ಮೇಣದಬತ್ತಿಗಳ ಬೆಳಕಿನಲ್ಲಿ ಅವಳ ಕಂದುಬಣ್ಣದ ಅಗಲವಾದ ಕಣ್ಣುಗಳು ಕಾಂತಿಯಿಂದ ಹೊಳೆಯುತ್ತಿದ್ದವು. ಅದೆಂಥ ಬೆರಗುಗೊಳಿಸುವ ಹುಟ್ಟುಹಬ್ಬದ ದಿನ ! ಅಂದು ಅವಳಿಗೆ ಹನ್ನೊಂದು ವರ್ಷ ತುಂಬಿತು ! ಮನೆಯಲ್ಲಿ ಎಲ್ಲರ ಜತೆ ನಲಿದು ಖುಷಿಪಟ್ಟ ಆ ರಸಘಳಿಗೆಗಳು !

ಶಾಲಿನಿ ನಿದ್ದೆಯಲ್ಲಿ ಹಾಗೇ ಹೊರಳಿದಳು. ಆಗಲೆ ಸೋನಿಯಾ ತನ್ನ ನೆನಪಿನ ಸುರುಳಿಗಳಿಂದ ಮರಳಿ ಬಂದಿದ್ದು. ಅವಳು ಹಾಸಿಗೆಯಿಂದ ಮೆಲ್ಲಗೆ ಜಿಗಿದು, ಮಂಚದಿಂದಿಳಿದು ಹಾಗೆಯೇ ಮೆಟ್ಟಂಗಾಲಿನಲ್ಲೆ ರೂಮಿನಾಚೆ ಬಂದಳು. ಹಾಗೆಯೇ ಬರುವಾಗ, ತಂಗಿಯ ರಾತ್ರಿಯುಡುಗೆಯನ್ನು ಕೆಳಗಿನವರೆವಿಗೂ ಸರಿಸಿದಳು.

ಊಟದ ಮನೆಯಲ್ಲಿ ಅವರ ಅಪ್ಪ-ಅಮ್ಮ ಊಟ ಮಾಡುತ್ತ, ಏನೋ ಮಾತಾಡುತ್ತಿದ್ದರು.

"ಆನಂದ್, ಆ ಅಡಿಗೆ ಗ್ಯಾಸ್ ಸಿಲಿಂಡರಿನ ತಿರುವು ಏಕೋ ಸರಿ ಇರುವಂತಿಲ್ಲ. ದಯವಿಟ್ಟು ಸ್ವಲ್ಪ ನೋಡ್ತೀರ? ಎಷ್ಟು ಬಿಗಿಯಾಗಿತ್ತು ಅಂದರೆ, ನನಗೆ ಅದನ್ನು ತೆಗೆಯಲಾಗಲಿಲ್ಲ."

"ಊಟ ಆದ ನಂತರ ನಾನು ಅದನ್ನು ಸರಿಮಾಡುತ್ತೇನೆ."

"ನೀವೇ ಸರಿಮಾಡಬಹುದೇನೋ ಅಲ್ಲವೆ? ಸೀಮೆಯೆಣ್ಣೆ ಸ್ಟೋವ್‌ನಲ್ಲಿ ಅಡುಗೆ ಮಾಡುವುದೆಂದರೆ- ಅದೂ ಈ ಉರಿಬೇಸಗೆ ದಿನಗಳಲ್ಲಿ - ಸಾಧ್ಯವೆ ಇಲ್ಲ ಎಂದೆನ್ನಿಸುತ್ತದೆ. ಓ, ನೀರು ಕುದೀತ ಇದೆ! ನಾನದನ್ನು ಕೆಳಗಿಳಿಸಬೇಕು."

ಸೋನಿಯಾಳಿಗೆ ತಂದೆತಾಯಿಯ ಜತೆ ಮಾತಿಗೆ ಸೇರಿಕೊಳ್ಳಬೇಕೆಂದೆನಿಸಿತು. ಆದರೆ ಅವಳು ರಾತ್ರಿ ತುಂಬ ಹೊತ್ತು ನಿದ್ರೆಗೆಡುವುದು ಅವರಿಗೆ ಇಷ್ಟವಿಲ್ಲ ಎಂಬುದು ಅವಳಿಗೆ ಗೊತ್ತಿತ್ತು. ಆದ್ದರಿಂದ ಮತ್ತೆ ಹಾಸಿಗೆಯೊಳಗೆ ಮುದುರಿಕೊಂಡಳು ಸೋನಿಯ. ಹುಟ್ಟುಹಬ್ಬದ ಉಡುಗೊರೆಗಳಲ್ಲಿ ಆರನ್ನು ನೆನಪಿಸಿಕೊಳ್ಳುವಷ್ಟರಲ್ಲಿ ಅವಳಿಗೆ ನಿದ್ದೆ ಹತ್ತಿತ್ತು.

* * * *

"ಅಯ್ಯೋ"

ಸೋನಿಯ ಥಟ್ಟನೆ ಹಾಸಿಗೆಯಲ್ಲಿ ಎದ್ದು ಕೂತಳು.

ಯಾರಾದರೂ ಅತ್ತರೇನು? ಸನತ್? ಶಾಲಿನಿ? ಹಾಗೆಯೆ ನಿದ್ರಿಸುತ್ತಿದ್ದ ಅವರ ಮುಖಗಳನ್ನು ನೋಡಿ, ಸಮಾಧಾನದ ಉಸಿರುಬಿಟ್ಟಳು. ಓಹೊ! ತನಗೆಲ್ಲೊ ಕೆಟ್ಟ ಕನಸು ಬಿದ್ದಿರಬೇಕು. ಅವಳ ಹೃದಯ ಇನ್ನೂ 'ಡವಡವ' ಎಂದು ಗಾಬರಿಯಿಂದ ಬಡಿದುಕೊಳ್ಳುತ್ತಿತ್ತು. ಮತ್ತೆ ಅವಳು ಹಾಸಿಗೆಯಲ್ಲಿ ಮುದುರಿಕೊಳ್ಳಲು ಪ್ರಯತ್ನಿಸುತ್ತಿದ್ದಂತೆ ಅವಳ ತಾಯಿ ಗಾಬರಿಯಿಂದ ಚೀತ್ಕರಿಸಿದ ಧ್ವನಿ ಕೇಳಿಸಿತು.

"... ಈ ಕಡೆ ಬಂದು ಬಿಡಿ ಆನಂದ್! ಆ ಗ್ಯಾಸ್ ತಿರುವನ್ನು ಬಿಡಿ, ಬೇಗ... ಗ್ಯಾಸ್ ಹೊತ್ತಿಕೊಂಡಿದೆ... ನೀವು ಸುಟ್ಟು ಹೋಗುತ್ತೀರ. ಆನಂದ್, ಆನಂದ್."

"ಇಲ್ಲ, ಮಾಯ, ನಾನದನ್ನು ಮುಚ್ಚಬೇಕು." ತಂದೆಯ ಕ್ಷೀಣವಾದ ಧ್ವನಿ ಸೋನಿಯಾಗೆ ಕೇಳಿಸಿತು.

"ಆದರೆ ಆ ಬೆಂಕಿ! ಹೊರಗೆ ಬನ್ನಿ ಆನಂದ್, ಹೊರಗೆ ಬನ್ನಿ."

ಆನಂದ್ ಸಂಕಟದಿಂದ ಕೂಗಿಕೊಂಡ: "ಓಡು ಮಾಯಾ, ಬೆಂಕಿಯಿಂದ ನಿನ್ನನ್ನು ರಕ್ಷಿಸಿಕೋ! ಮಕ್ಕಳು, ಮಕ್ಕಳು. ಓ, ದೇವರೇ... ಬಿಸಿ ಸುಡುತ್ತಿದೆ."

ಸೋನಿಯ ಹಾಸಿಗೆಯಿಂದೊಮ್ಮೆಗೇ ನೆಗೆದು, "ಅಪ್ಪ, ಅಪ್ಪ..." ಎಂದು ಕೂಗಿಕೊಂಡು ಮಿಂಚಿನಂತೆ ಹಾರಿ ಊಟದ ಮನೆಗೆ ಬಂದಳು.

ತುಟಿಗಳನ್ನು ಕಚ್ಚಿಕೊಂಡು, ನಡುಗುತ್ತ, ಕೆಲವು ಅಡಿಗಳ ದೂರ ನಿಂತಿದ್ದ ತಾಯಿಯನ್ನು ಸೋನಿಯ ನೋಡಿದಳು. ಆಕೆ ಗಂಡನನ್ನು ಹಿಡಿದುಕೊಳ್ಳಲು ಇದ್ದಕ್ಕಿದ್ದ ಹಾಗೆ ಮುನ್ನುಗ್ಗಿದಳು.

ಅಡುಗೆ ಮನೆಯ ಬಾಗಿಲಿನ ಕಡೆಗೆ ತೂರಾಡುತ್ತ ಬರುತ್ತಿದ್ದ ಆತ ಅವಳ ತೋಳುಗಳಲ್ಲಿ ಕುಸಿದುಬಿದ್ದ. ಎತ್ತರವಾಗಿ ಬೆಳೆದು ಬಲಿಷ್ಠನಾಗಿದ್ದ ಆತನ ಭಾರ ತಡೆಯಲಾರದೆ ಆಕೆ ಕೆಳಗೆ ಬೀಳುವುದರಲ್ಲಿದ್ದಳು.

ಅಡುಗೆ ಮನೆಯಿಂದ ಬೆಂಕಿಯ ಜ್ವಾಲೆ ಸೋನಿಯಾಳ ಮುಖದ ಮೇಲೆ ಅಪ್ಪಳಿಸಿತು. ಗ್ಯಾಸ್ ಸಿಲಿಂಡರಿಗೆ ಬೆಂಕಿ ಹೊತ್ತಿತ್ತು. ಇನ್ನು ಅದು ಯಾವ ಗಳಿಗೆಯಲ್ಲಾದರೂ ಆಸ್ಫೋಟಿಸಬಹುದು! "ಗಾಳಿ, ಗಾಳಿ, ನಮಗೆ ಗಾಳಿ ಬೇಕು" ಕಿರುಚಿದಳು ಸೋನಿಯ. "ಅಮ್ಮ ನಡಿ."

ಆದರೆ ಆಕೆಯ ತಾಯಿ ಮಾತ್ರ ದಿಗ್ಭ್ರಮೆಯಿಂದ ಕ್ಷೀಣ ಧ್ವನಿಯಲ್ಲಿ ಹೇಳಿದಳು: "ಆನಂದ್, ಆನಂದ್, ಅವರು ಪ್ರಜ್ಞಾಶೂನ್ಯರಾಗಿದ್ದಾರೆ."

ಸೋನಿಯಾ ಮುಂದೆ ಬಂದು ತಂದೆಯ ಭುಜಗಳನ್ನು ಹಿಡಿದಳು. ಸುಟ್ಟ ಮಾಂಸದ ಕೆಟ್ಟ ವಾಸನೆ ಅವಳ ಮೂಗಿಗೆ ಬಡಿಯಿತು. ಅವಳಿಗೆ ಅಸಹ್ಯವಾಯಿತು. ಬಗ್ಗಿ ತಂದೆಯನ್ನು ನೋಡಿದಳು. ಕೈಕಾಲು ನಡುಗಿತು. ಆತನ ಮುಖ ಒಂದು ದೊಡ್ಡ ಸುಟ್ಟ ಮುದ್ದೆ ಆಗಿತ್ತು. ಕತ್ತಿನ ಬಳಿಯ ಚರ್ಮ ಸುಟ್ಟು ಕಾದ ಬೆಂಕಿಯಂತೆ ಕೆಂಪಗಾಗಿತ್ತು.

"ಅಪ್ಪ."

"ಎಳಿ, ಅಮ್ಮ ಅಪ್ಪನನ್ನು ಈಚೆಗೆ ಎಳಿ" ಎಂದು ಕೂಗಿಕೊಂಡ ಸೋನಿಯ ಅಪ್ಪನನ್ನು ಅಡುಗೆ ಮನೆಯಿಂದ ಹೊರಕ್ಕೆ ಎಳೆದುಕೊಂಡು ಊಟದ ಮನೆಯ ಹೊರಕ್ಕೆ ಎಳೆದು ತಂದಳು. "ಹೊರಗೆ, ಹೊರಗೆ ಹೋಗೋಣ."

ಮಗಳು, ತಾಯಿ ಮೇಲುಸಿರು ಬಿಡುತ್ತಿದ್ದರು. ಸುಡುವ ಗಾಳಿ ಅವರ ಕಣ್ಣುಗಳನ್ನು ಚುಚ್ಚಿ, ಉಸಿರು ಕಟ್ಟುವಂತೆ ಮಾಡಿತ್ತು. ಆನಂದನ ಶರೀರವನ್ನು ಬೆನ್ನ ಮೇಲೆ ಹೊತ್ತು ಮನೆಯ ಮುಂಭಾಗಕ್ಕೆ ಬಂದು ಹುಲ್ಲಿನ ಮೇಲೆ ಹಾಕಿದರು. ಇಬ್ಬರೂ ಅಲ್ಲೇ ನೆಲಕ್ಕುರುಳಿದರು.

"ಶ್ರೀಮತಿ ಸಿನ್ಹಾ, ಶ್ರೀಮತಿ ಸಿನ್ಹಾ, ಏನಾಯಿತು?"

ಸೋನಿಯಾ ತಲೆ ಎತ್ತಿ ಕನಿಕರ ಸೂಚಿಸುತ್ತಿದ್ದ ಪಕ್ಕದ ಮನೆಯವರನ್ನು ನೋಡಿದಳು.

ಸಮೀಪ ಬಂದು ನೋಡಿದ ಆ ವಯಸ್ಸಾದ ದಂಪತಿಗಳು "ಅಯ್ಯೋ ದೇವರೆ! ಡಾ. ಸಿನ್ಹಾ ಅವರಿಗೇನಾಯ್ತು?" ಎಂದು ಕೇಳಿದರು.

ಮಾಯಾಸಿನ್ಹಾ ನಿಧಾನವಾಗಿ ತಡೆದು ತಡೆದು ನುಡಿದಳು: "ಗ್ಯಾಸ್, ಅಯ್ಯೋ ದೇವರೆ! ನನ್ನ ಗಂಡ."

"ಆನಂದ್, ಆನಂದ್." ಗಂಡನ ಶರೀರದ ಮೇಲೆ ಬಿದ್ದು ಅಳಲಾರಂಭಿಸಿದಳು.

"ಈ ತಕ್ಷಣ ನಮಗೆ ನೆರವು ಬೇಕು" ಎಂದು ಹೇಳಿದ ಮುದುಕಿ ತನ್ನ ಗಂಡನಿಗೆ ಹೇಳದಳು: "ಏನೋದ್, ಆಂಬುಲೆನ್ಸ್‌ಗೆ ಫೋನ್ ಮಾಡಿ. ನಾನಿಲ್ಲಿ ಇರುತ್ತೇನೆ."

ಮುದುಕ ರಸ್ತೆಯಲ್ಲಿಯೇ ಬೇಗ ಬೇಗ ಓಡಿದ. ಅವನ ಹೆಂಡತಿ, ಸಿನ್ಹಾಳ ಬೆನ್ನಿನ ಮೇಲೆ

ಕೈಯಿರಿಸಿ, ಮೃದುವಾಗಿ ನೇವರಿಸುತ್ತ ನುಡಿದಳು: "ಧೈರ್ಯ ತಂದುಕೋ. ನಮಗೆ ಈಗಲೇ ಸಹಾಯ ದೊರೆಯುತ್ತದೆ."

ತಕ್ಷಣ ಸೋನಿಯಾಗೆ ಶಾಲಿನಿ ಮತ್ತು ಸನತ್‌ರ ನೆನಪಾಯಿತು. "ಅಯ್ಯೋ ದೇವರೇ" ಎಂದು ಪಿಸುಗುಟ್ಟಿದ ಅವಳ ಮುಖ ಬಿಳುಚಿಕೊಂಡಿತು.

ಮಿಂಚಿನಂತೆ ಹಾರಿದ ಸೋನಿಯ "ಶಾಲಿನಿ, ಸನತ್, ಇಬ್ಬರೂ ಮನೆಯ ಒಳಗಡೆ ಇದ್ದಾರೆ" ಎಂದು ಕೂಗಿಕೊಂಡು ಒಳಕ್ಕೆ ಓಡಿದಳು.

"ಸೋನಿಯಾ, ತಡಿ" ಎಂದು ನೆರೆಮನೆಯಜ್ಜಿ ಕೂಗಿಕೊಂಡದ್ದು ಕೇಳಿಸಿತು. ಆದರೆ, ಅವಳು ಆ ವೇಳೆಗಾಗಲೆ ಮುಂದಿನ ಬಾಗಿಲನ್ನೆಳೆದು ನೂಕಿ, ದಢಾರನೆ ತೆರೆದಾಗಿತ್ತು.

ಬಾಗಿಲನ್ನು ತೆರೆದ ಕೂಡಲೇ ಮನೆಯೊಳಗಿನ ಬೆಂಕಿಯ ಕಾವು ಕಬ್ಬಿಣದ ಕೈಯಿಂದ ಕೆನ್ನೆಗೆ ಅಪ್ಪಳಿಸಿದಂತೆ, ಅವಳ ಮುಖಕ್ಕೆ ಬಡಿಯಿತು. ಒಳಕ್ಕೆ ಹೋಗಲಾರದೆ ಹೆಜ್ಜೆ ಹಿಂದೆ ಇಟ್ಟಳು. ಗಾಳಿ ಬೆಳಕಿಗೆ ಹೆಚ್ಚು ಅವಕಾಶವಿಲ್ಲದ ಅಡುಗೆಮನೆಯಲ್ಲಿ ಉರಿಯುತ್ತಿದ್ದ ಗ್ಯಾಸ್ ಸಿಲಿಂಡರ್ ಎಲ್ಲವನ್ನೂ ಭಸ್ಮ ಮಾಡುತ್ತಿತ್ತು.

ನರಗಳನ್ನೆಲ್ಲಾ ಜಗ್ಗುವಂಥ ಶಬ್ದ ಮಾಡಿಕೊಂಡು ಪಾತ್ರೆ ಪರಟೆಗಳ ರಾಶಿಯೊಂದು ನೆಲಕ್ಕೆ ಉರುಳಿ ಬಿದ್ದಿತು. ಆ ನಂತರ ಕಿಟಕಿಯ ಜಾಲಿ ಜೋರಾಗಿ ಶಬ್ದ ಮಾಡುತ್ತಾ ಪಾತ್ರೆ ತೊಳೆಯುವ ಬಚ್ಚಲಲ್ಲಿ ಬಿದ್ದಿತು. ಮಲಗುವ ಕೋಣೆಯಿಂದ ನೆರವಿಗಾಗಿ ಬರುತ್ತಿದ್ದ ಕೂಗು ಈ ಶಬ್ದಗಳಲ್ಲಿ ಕೇಳಿಸುತ್ತಲೇ ಇರಲಿಲ್ಲ.

ಶಾಲಿನಿ, ಸನತ್, ಅಯ್ಯೋ ದೇವರೆ, ಅವರು ಸುಟ್ಟು ಹೋಗುತ್ತಾರೆ!

ನೀಳವಾದ ಉಸಿರು ಎಳೆದು, ಅದನ್ನು ಭದ್ರವಾಗಿ ಹಿಡಿದುಕೊಂಡು, ಸೋನಿಯಾ ಬಾಗಿಲನ್ನು ಮುಂದಕ್ಕೆ ತಳ್ಳಿದಳು. ಡ್ರಾಯಿಂಗ್ ರೂಮಿನ ಮೂಲಕ ನೆಗೆದು ಊಟದ ಮನೆಗೆ ಬಂದಳು.

ಅವಳ ಕಣ್ಣಿಗೆ ಬಿದ್ದ ದೃಶ್ಯ ಘೋರವಾಗಿತ್ತು.

ಕುರ್ಚಿ, ಮೇಜು ಮುಂತಾದ ಸಾಮಾನುಗಳೆಲ್ಲಾ ಬೆಂಕಿಯ ಶಾಖದಿಂದ ಒಡೆಯುತ್ತಿದ್ದವು. ಗೋಡೆ ಬೀರುವಿನ ಬಾಗಿಲುಗಳು ನೇತಾಡುತ್ತಿದ್ದವು. ಅದರೊಳಗಿದ್ದ ಸಾಮಾನು ಚೆಲ್ಲಾಪಿಲ್ಲಿ ಆಗಿದ್ದವು.

ಎಲ್ಲ ಕಡೆ ಹರಡಿದ್ದ ಬೆಂಕಿಯ ಜ್ವಾಲೆ ಅವಳ ಮುಖ, ಕೈ, ಎದೆ, ಕಾಲುಗಳನ್ನು ಸುಡುತ್ತಿದ್ದವು. ಕಣ್ಣಿನ ಮೇಲೆ ಇದ್ದ ಕೂದಲು ಸುಟ್ಟು ಮಾಯವಾಗಿದ್ದವು. ಅವಳ ಚರ್ಮ ಸುಟ್ಟ ವಾಸನೆ ಅವಳಿಗೆ ಭಯ ಹುಟ್ಟಿಸಿತು. ಅವಳು ಒಂದು ವಿಚಿತ್ರ ರೀತಿಯ ತೂರಾಟಕ್ಕೆ ಒಳಗಾದಳು. "ತುಂಬ ತಡವಾಗುವುದಕ್ಕೆ, ಮುಂಚೆ ಹಿಂತಿರುಗು" ಎಂದು ಅವಳ ಒಂದು ಒಳ ಧ್ವನಿ ಹೇಳಿತು. ಆದರೆ ಅವಳ ಬುದ್ಧಿಯಲ್ಲಿ ಕೂಗಿದ ಧ್ವನಿ ಹೇಳಿತು: "ನಿನ್ನ ತಂಗಿಯನ್ನೂ ತಮ್ಮನನ್ನೂ ರಕ್ಷಿಸು."

ಸೋನಿಯ ಮುಂದೆ ಹೆಜ್ಜೆಯಿಟ್ಟಳು, ಮುಗ್ಗರಿಸಿದಳು. ಮುಗ್ಗರಿಸುತ್ತಾ ಮಲಗುವ ಕೋಣೆಗೆ

ಬಂದಳು. ಶಾಲಿನಿ ತಮ್ಮನನ್ನು ಎದೆಗೆ ಅವುಚಿಕೊಂಡು ಅಳುತ್ತಾ ಸಹಾಯಕ್ಕಾಗಿ ಕೂಗುತ್ತಿದ್ದಳು. ಬೆವರಿನಿಂದ ಅವಳ ಕೂದಲೆಲ್ಲಾ ಒದ್ದೆಯಾಗಿತ್ತು.

ಸೋನಿಯಾ, ಸೋನಿಯಾ ಎಂದು ಗಾಬರಿಯಿಂದ ಕೂಗಿಕೊಂಡ ಶಾಲಿನಿ ಅಕ್ಕನ ತೋಳುಗಳಿಗೆ ಹಾರಿದಳು. ಸೋನಿಯ ಅವಳನ್ನು ಹಿಡಿದುಕೊಂಡು, ನೋವಿನಿಂದ ನರಳಿದಳು. ಧೈರ್ಯ ಹೇಳಲು ಹೋದ ಅವಳಿಗೆ ಗಂಟಲು ಒಣಗಿ ಹೋಗಿ ಮಾತೇ ಬರಲಿಲ್ಲ.

ಏದುಸಿರುಬಿಡುತ್ತ, ಸೋನಿಯಾ ತನ್ನ ತಂಗಿಯನ್ನು ಬಲನಡುವಿಗೇರಿಸಿಕೊಂಡಳು. ಪುಟ್ಟ ತಮ್ಮ ಸನತ್‌ನನ್ನು ಎದೆಗವಚಿಕೊಂಡಳು. "ಸೋನಿಯ ! ಅಮ್ಮ ! ಅಪ್ಪ !" ಎಂದು ಸನತ್ ಕೂಗಿಕೊಂಡ.

"ಷ್‌ಷ್‌ಷ್ ಶಾಲಿನಿ ಸನತ್" ಎಂದು ಗಾಬರಿಗೊಂಡು ನಡುಗುತ್ತಿದ್ದ ಅವರನ್ನು ಸಂತೈಸಿ ಅವರ ಕಡೆ ಧೈರ್ಯದ ನಗು ಬೀರಲು ಪ್ರಯತ್ನಿಸಿದಳು.

ಆಗಲೆ ಸೋನಿಯಾ ತನ್ನ ಕೈಗಳನ್ನು ನೋಡಿಕೊಂಡದ್ದು... ಅದೇನು ಅವಳ ಕೈ ಆಗಿತ್ತೊ, ಅಥವಾ ಸುಟ್ಟು ಹೋದ ಮಾಂಸದ ಮುದ್ದೆಯೋ ? ಅಂದು ಸಂಜೆ, ಎರಡನೆ ಬಾರಿಗೆ ಅವಳಿಗೆ ತನ್ನ ಕಾಲು, ದಾರಿ ಸಾಗದೆ ಕುಸಿಯುವಂತೆ ಅನುಭವ ಆಯ್ತು. ಅವಳ ಮನಸ್ಸಿನಲ್ಲಿ ಭೀತಿಯ ತೆರೆ ಹಾಯ್ದು ಹೋಯಿತು....

"ನಾವುಗಳು ಇಲ್ಲಿಂದ ಹೊರಗೆ ಹೋಗಲು ಸಾಧ್ಯ ಆಗದು. ಇಲ್ಲೇ ನಾವೆಲ್ಲ ಸಾಯುತ್ತೇವೆ" ಎಂದು ಯೋಚಿಸಿದಳು. ಆದರೆ ಅವಳ ಒಳಮನಸ್ಸು ಹೇಳಿತು: "ಸೋನಿಯಾ, ಮುಂದೆ ನಡೆ ! ನೀನು ಇದನ್ನು ಸಾಧಿಸಬಲ್ಲೆ."

ಸೋನಿಯಾ ಥಟ್ಟನೆ ಮುಂದೆ ಹೆಜ್ಜೆಯಿರಿಸಿದಳು.

ಮರದ ಕಾಲಿನ ನೆರವಿನಿಂದ ನಡೆಯುತ್ತಿರುವಂತೆ ಅವಳಿಗೆ ಭಾಸವಾಯಿತು: ನಿಧಾನವಾಗಿ ನಡೆದಳು ಸೋನಿಯಾ. ಅವಳಿಗೆ ಅವುಚಿಕೊಂಡು ಜೋತು ಬಿದ್ದ ತಮ್ಮ-ತಂಗಿಯರ ಭಾರವನ್ನು ಹೊತ್ತು ತಕ್ಷಣ ಓಡಲು ಪ್ರಾರಂಭಿಸಿದಳು. ಅವಳ ಹಿಂಭಾಗದಲ್ಲಿ ಷೆಲ್ಫ್ ದಢಾರನೆ ಕೆಳಗೆ ಬಿದ್ದು ಅವಳನ್ನು ಗಾಬರಿಗೊಳಿಸಿತು. ಗಟ್ಟಿಯಾಗಿ ಹಿಡಿದಿಟ್ಟ ಉಸಿರಿನಿಂದ ಶ್ವಾಸಕೋಶಗಳು ಒಡೆಯುವಂತೆ ಭಾಸವಾಯಿತು. ಅವಳ ಕಾಲುಗಳು ಸ್ಥಗಿತಗೊಂಡವು. ಮುಂದಿನ ಬಾಗಿಲಿನವರೆಗೆ ತಲುಪುವುದು ಅಸಾಧ್ಯವಾಯಿತು.

"ನಿನಗೆ ಸಾಧ್ಯ, ಸೋನಿಯ ನಿನಗೆ ಸಾಧ್ಯ" ಎಂದು ಅವಳ ಅಂತರಾಳ ಪ್ರೇರೇಪಿಸಿತು. ಸೋನಿಯ ಹಲ್ಲು ಕಚ್ಚಿಕೊಂಡು ಮುಂದೆ ನಡೆದಳು.

ಅವಳು ಈಗ ಮುಂದಿನ ಬಾಗಿಲನ್ನು ತಲುಪಿ ಅದನ್ನು ತಳ್ಳಿ ತೆಗೆದಳು. ತಲೆ ಎತ್ತದೆ ಮೆಟ್ಟಲುಗಳ ಮೇಲೆ ಬಿದ್ದು ಉರುಳಿದಳು. ನೋವಿನಿಂದ ಕೂಗಿಕೊಂಡಳು: "ಅಮ್ಮಾ ನಾನು ಉರಿಯುತ್ತಿದ್ದೇನೆ. ನಾನು ಉರಿಯುತ್ತಿದ್ದೇನೆ."

ಅವಳ ಕಾಲಿನ ಶಕ್ತಿ ಉಡುಗಿಹೋಗಿ ಅವಳು ಪ್ರಜ್ಞಾಶೂನ್ಯಳಾಗಿ ಬಿದ್ದಳು.

* * * *

"ಮಾತನಾಡಬೇಡ" ಎಂದು ಡಾಕ್ಟರ್ ಪ್ರೀತಿಯಿಂದ ಹೇಳಿದ. ಆಸ್ಪತ್ರೆಯ ಹಾಸಿಗೆಯಲ್ಲಿ ಮಲಗಿದ್ದ ಅವಳ ಕಪ್ಪು ಕಣ್ಣುಗಳನ್ನು ನೋಡುತ್ತಾ ಆತ ಅವಳಿಗೆ ಧೈರ್ಯ ಹೇಳುತ್ತಿದ್ದ.

"ಅಮ್ಮ ಅಪ್ಪ ಎಲ್ಲಿ? ಶಾಲಿನಿ, ಸನತ್ ಎಲ್ಲಿದ್ದಾರೆ?"

"ನಿನ್ನ ತಾಯಿ, ತಮ್ಮ ತಂಗಿ ಎಲ್ಲಾ ಚೆನ್ನಾಗಿದ್ದಾರೆ."

"ಆದರೆ ನಾನೇಕೆ ಇಲ್ಲಿದ್ದೇನೆ? ಈ ಬ್ಯಾಂಡೇಜ್ ಪಟ್ಟಿಗಳನ್ನೆಲ್ಲಾ ಯಾಕೆ ಕಟ್ಟಿದ್ದೀರಿ? ನನಗೆ ಇವು ನೋವು ಉಂಟುಮಾಡುತ್ತಿವೆ."

"ನಿನಗೆ ತುಂಬ ಗಾಯವಾಗಿದೆ" ಎಂದು ಕನಿಕರದಿಂದ ಡಾಕ್ಟರ್ ಹೇಳಿದರು. "ನಿನ್ನ ಮುಖ, ಕೈಗಳು ಮತ್ತು ಕತ್ತಿನ ಬಳಿ ತುಂಬ ಸುಟ್ಟ ಗಾಯಗಳಾಗಿವೆ. ಆದರೆ ಒಳಗಡೆ ನೀನೇ ಇದ್ದೀಯಾ ಧೈರ್ಯವಂತೆ, ಸೋನಿಯಾ! ತಮ್ಮ ತಂಗಿಯರನ್ನು ಬದುಕಿಸಿದ ಸೋನಿಯಾ! ಗಾಯದ ಕೆಲವು ಕಲೆಗಳಿಂದ ನೀನು ಹೆದರುತ್ತೀಯ ಎಂದು ನಾನು ನಂಬಿಲ್ಲ. ನೀನು ಏನು ಹೇಳುತ್ತೀಯಾ?"

ಸೋನಿಯ ಡಾಕ್ಟರನ್ನು ನೋಡಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. "ಇಲ್ಲ" ಎಂದು ಕ್ಷೀಣ ಸ್ವರದಲ್ಲಿ ಹೇಳಿದಳು "ಎಂದೆಂದಿಗೂ ಇಲ್ಲ."

# ಮೃತ್ಯು ಪಥ

ಬಾಲಕ ಶತ್ರುಘ್ನನ ದಟ್ಟ ಕಂದು ಬಣ್ಣದ ಕಣ್ಣು ಸಂಭ್ರಮದಿಂದ ಮಿಂಚಿದುವು. ಅವನು ಖುಷಿಯಿಂದ ಕೈ ಚಪ್ಪಾಳೆ ತಟ್ಟುತ್ತ ಭಾವಾವೇಶದಲ್ಲಿ ಕೂಗಿದ: "ಎಂಥ ಖುಷಿ ! ನಾಟಕ ಎಂದರೆ ನನಗೆ ತುಂಬ ಪ್ರಿಯ. ಒಂದಲ್ಲೊಂದು ದಿನ, ನಾನು ಕೂಡ ಮಹಾಭಾರತದಲ್ಲಿ ಅರ್ಜುನನಾಗಿ ಪಾತ್ರ ವಹಿಸುತ್ತೇನೆ." ತನ್ನ ಎದೆ ಸೆಟೆದು, ಉಬ್ಬಿಸಿ, ಎತ್ತರದ ಸ್ವರದಲ್ಲಿ ನುಡಿದ: "ಕೃಷ್ಣಾ, ಪರಾಕ್ರಮಿಗಳೂ ಯೋಧರೂ ಯುದ್ಧಕ್ಕಾಗಿ ಪ್ರತೀಕ್ಷಿಸುತ್ತಿರುವ ಆ ಜಾಗಕ್ಕೆ ನನ್ನ ರಥವನ್ನು ನಡೆಸು."

ಹೆಂಗಸರು ತಮ್ಮ ಸೀರೆ ಸೆರಗಿನ ಹಿಂದಿನಿಂದಲೆ ಕಿಲಕಿಲನೆ ನಕ್ಕರು. ಮಕ್ಕಳೆಲ್ಲ ಜೋರಾಗಿ ನಕ್ಕು ಕೂಗಾಡಿದರು. ಶತ್ರುಘ್ನನ ಹಾಗೆಯೇ ಅನುಕರಿಸಿ, "ಕೃಷ್ಣಾ, ನನ್ನ ರಥವನ್ನು ನಡೆಸು..." ಎಂದು ತಮಾಷೆ ಮಾಡಿದರು.

ಕೆಲಬಾರಿ ಗ್ರಾಮದ ಎಲ್ಲರಿಗೂ ತಬ್ಬಲಿ ಹುಡುಗ ಶತ್ರುಘ್ನನನ್ನು ಕಂಡರೆ ತುಂಬ ಪ್ರೀತಿ. ಹನ್ನೆರಡು ವರ್ಷದ ಶತ್ರುಘ್ನ ಕೆಲವೇ ವರ್ಷಗಳ ಹಿಂದೆ ಅವರ ಚಿಕ್ಕಪ್ಪನ ಸಂಗಡವಿರಲು ಹಳ್ಳಿಗೆ ಬಂದಿದ್ದನು. ಈ ತೆಳ್ಳನೆಯ ಬಾಲಕ ಎಲ್ಲರಿಗೂ ನೆರವಾಗಲು ಸದಾ ಸಿದ್ಧನಾಗಿದ್ದ. ಯಾವಾಗಲೂ ನಗುತ್ತಾ ಸಂತೋಷದಿಂದ ಇರುತ್ತಿದ್ದ.

ಇನ್ನೂ ಮುಗುಳುನಗು ನಗುತ್ತಿದ್ದ ಹೆಂಗಸರ ಪೈಕಿ ಹಿರಿಯಳಾದ, ಚಿತನ್ ದೇವಿ ಹೇಳಿದಳು: "ಸರಿ ಹಾಗಾದರೆ. ನಾವು ನಿನ್ನನ್ನು ಕರೆದುಕೊಂಡು ಹೋಗುತ್ತೇವೆ. ಸಂಜೆಗೆ ಮೊದಲು ಹೊರಡುತ್ತೇವೆ."

ಅಮಿತ ಉತ್ಸಾಹದಿಂದ ಜಿಗಿದು ತನ್ನ ಚಿಕ್ಕಪ್ಪನ ಗುಡಿಸಲಿನ ಕಡೆಗೆ ಹಳ್ಳಿಯ ಹಾದಿಯಲ್ಲಿ ಶತ್ರುಘ್ನ ಓಡಿದ.

ಸಿಳ್ಳೆ ಹಾಕುತ್ತ ಎತ್ತರದ ಧ್ವನಿಯಲ್ಲಿ ಹಾಡುತ್ತಾ ಶತ್ರುಘ್ನ ಸ್ನಾನ ಮುಗಿಸಿದ. ಶುಭ್ರವಾಗಿ ಶುಚಿಗೊಳಿಸಿದ್ದ ಹತ್ತಿಯಂಗಿ, ಚಡ್ಡಿ ಧರಿಸಿದ. ಅನಂತರ ನೆಲದ ಮೇಲೆ ತನಗಾಗಿಯೇ ಮೀಸಲಿರಿಸಿದ್ದ ಹಿತ್ತಾಳೆ ತಟ್ಟೆಯ ಮುಂದೆ ಕುಳಿತು ಬೇಗ ಬೇಗ ಊಟ ಮಾಡಲು ಪ್ರಾರಂಭಿಸಿದ.

"ನಿಧಾನವಾಗಿ, ಶತ್ರುಘ್ನ, ನಿಧಾನವಾಗಿ ಊಟಮಾಡು."

ನಿಧಾನವಾಗಿ ಊಟ ಮಾಡುವುದೆಂದರೆ ಶತ್ರುಘ್ನನಿಗೆ ಪ್ರಯಾಸದ ಕೆಲಸ. ಅದರಲ್ಲೂ ಅವನಿಗೆ ತುಂಬ ಇಷ್ಟವಾದ ಬಟಾಣಿ ಭಾತನ್ನು ನಿಧಾನವಾಗಿ ತಿನ್ನುವುದೆಂದರೆ ಸಾಧ್ಯವಾಗದ ಮಾತು. ಕೊನೆಗೆ ಅವನು ತನ್ನ ಬೆರಳು, ತುಟಿಗಳನ್ನು ನೆಕ್ಕುತ್ತಾ ಹೇಳಿದ: "ಎಂಥ ಸೊಗಸಾದ ಊಟ ಚಿಕ್ಕಮ್ಮ! ನಾನು ಸ್ವಲ್ಪ ಹೆಚ್ಚಾಗಿಯೇ ತಿಂದುಬಿಟ್ಟೆ ಎಂದು ಕಾಣುತ್ತದೆ."

"ಯಾವಾಗಲೂ ನೀನು ಹೀಗೇ" ಎಂದು ಆಕೆ ನಕ್ಕಳು.

"ಆದರೆ ಇಂದು ನನಗೆ ಈ ಹೆಚ್ಚಿನ ಆಹಾರ ಅಗತ್ಯ. ಭಾಟ ಗ್ರಾಮದಲ್ಲಿ ಮಹಾಭಾರತವನ್ನು ನೋಡಲು ನಾವೆಲ್ಲಾ ಹೋಗುತ್ತಿದ್ದೇವೆ. ನಾಳೆ ಬೆಳಿಗ್ಗೆ ನಾವು ಹಿಂತಿರುಗುತ್ತೇವೆ. ಚಿತನ್ ದೇವಿ ನಮ್ಮನ್ನು ಕರೆದುಕೊಂಡು ಹೋಗುತ್ತಾರೆ."

"ಒಳ್ಳೆಯದು ಶತ್ರುಘ್ನ. ಆದರೆ ಜಾಗ್ರತೆಯಾಗಿರು. ತುಂಟತನ ಮಾಡಬೇಡ."

"ಆಗಲಿ ಚಿಕ್ಕಮ್ಮ" ಎಂದು ತುಂಟ ನಗೆ ಬೀರುತ್ತ ಶತ್ರುಘ್ನ ಹೇಳಿದ: "ಯಾವಾಗಲೂ ಇರುವಂತೆ." ಅವನು ಹೊರಕ್ಕೆ ಓಡಿದ. ಚಿಕ್ಕಮ್ಮ ಪ್ರೀತಿಯ ನಗುಬೀರಿ ತಲೆ ಆಡಿಸಿ, ಸಮಾಧಾನಪಟ್ಟುಕೊಂಡಳು.

ನಾಲ್ವರು ಮಹಿಳೆಯರು ಆರು ಮಕ್ಕಳು ಹಳ್ಳಿಯಿಂದ ಹೊರಡುವ ವೇಳೆಗೆ ಸೂರ್ಯ ಅಸ್ತಮಿಸುತ್ತಿದ್ದ. ಸಣ್ಣ ಕಾಲುದಾರಿಯ ಎರಡೂ ಕಡೆ ಬೆಳೆದಿದ್ದ ಸಣ್ಣ ಸಣ್ಣ ಪೊದೆಗಳನ್ನು ಬಿಟ್ಟರೆ ಉಳಿದೆಲ್ಲಾ ಮೈದಾನ ಪ್ರದೇಶ. ನವೆಂಬರ್ ತಿಂಗಳ ತಣ್ಣನೆಯ ಗಾಳಿ ಅವರ ಮೂಗಿಗೆ ಬಡಿಯುತ್ತಿತ್ತು.

"ಚಳಿಗಾಲ ಇಷ್ಟರಲ್ಲೇ ಪ್ರಾರಂಭವಾಗಲಿದೆ" ಎಂದಳು ಚಿತನ್‌ದೇವಿ. ಇತರ ಮಹಿಳೆಯರು ಹೌದೆಂದು ತಲೆಯಾಡಿಸಿದರು. ಶಾಲುಗಳನ್ನು ಭುಜಗಳ ಮೇಲೆ ಬಿಗಿಯಾಗಿ ಹೊದ್ದುಕೊಂಡರು.

ಶತ್ರುಘ್ನ ತನ್ನ ಸಂಗಡವೆ ನಡೆಯುತ್ತಿದ್ದ ಪುಟ್ಟ ಹುಡುಗಿ ನಿರ್ಮಲಳ ಕೈ ಹಿಡಿದು ಮೆಲುಧ್ವನಿಯಲ್ಲಿ ಸಿಳ್ಳೆ ಹಾಕಿದ.

"ರೈಲು ಹಳಿಗಳ ಮೇಲೆಯೆ ಹೋಗಿಬಿಡೋಣಂತೆ..." ಎಂದು ಸೂಚಿಸಿದ ಚಿತನ್‌ದೇವಿ ಹೇಳಿದಳು: "ಫೂಲಿಝಾರ್ ತೊರೆಯನ್ನು ರೈಲ್ವೆ ಹಳಿ ಸೇತುವೆ ಮೂಲಕ ದಾಟಿ ಹೋಗುವುದು ಸುಲಭ." ಈ ರೈಲು ಹಾದಿ ಭಿಲಾಯ್ ಕಡೆಯಿಂದ ಬಂದಿತ್ತು.

"ಆದರೆ ಇದು ಕ್ಷೇಮವೇ ?" ಎಂದು ಕೇಳಿದ ಶತ್ರುಘ್ನ.

"ರಸ್ತೆ ಹಾದಿಗಿಂತ ಕ್ಷೇಮ. ಈ ವೇಳೆಯಲ್ಲಿ ಯಾವ ರೈಲೂ ಬರುವುದಿಲ್ಲ. ಬೇಗ ಹೋಗೋಣ ಬನ್ನಿ. ನಾವು ತಡವಾಗಬಾರದು."

ಎತ್ತರದಲ್ಲಿ ಇದ್ದ ರೈಲು ಹಳಿ ಮಾರ್ಗವನ್ನು ತಲುಪಲು ಹೆಂಗಸರು ಮತ್ತು ಮಕ್ಕಳಿಗೆ ಶತ್ರುಘ್ನ ಸಹಾಯ ಮಾಡಿದ. ನಿರ್ಮಲಳ ಕೈಯನ್ನು ಬಿಗಿಯಾಗಿ ಹಿಡಿದುಕೊಂಡು ಶತ್ರುಘ್ನ ಮುಂದೆ ಸಾಗಿದ. ದಪ್ಪನಾದ ಕರಿಯ ಕಂಬಳಿಯಂತೆ ರಾತ್ರಿಯ ಕತ್ತಲು ಕವಿದಿತ್ತು. ಹಾದಿಯನ್ನು ತುಳಿದು ತಿಳಿಯಬೇಕೆ ವಿನಹ ಕಾಣುವಂತಿರಲಿಲ್ಲ. ಹಳಿಗಳ ನಡುವಣ ಹಾಕಿದ ಮರದ ಪಟ್ಟಿಗಳ ಅಂತರಕ್ಕೆ ಸರಿಯಾಗಿ ಹೆಜ್ಜೆ ಹಾಕುವುದನ್ನು ತಿಳಿದುಕೊಂಡಂತೆ ನಡೆಯುವುದು ಸುಲಭವಾಯಿತು.

"ನಿಧಾನ, ಅಮ್ಮ ಬೇಗ ಬೇಗ ನಡೆಯಲು ನನಗೆ ಆಗುವುದಿಲ್ಲ." ಒಬ್ಬ ಬಾಲಕ ಹಿಂದಿನಿಂದ

ಹೇಳಿದ್ದು ಶತ್ರುಘ್ನನಿಗೆ ಕೇಳಿಸಿತು. ಚಿತನ್‌ದೇವಿಯ ಕಂಕುಳಲ್ಲಿದ್ದ ಪುಟ್ಟ ಬಾಬ್ಲಿ ಅಳಲು ಪ್ರಾರಂಭಿಸಿದ.

"ಇಷ್ !" ಎಂದು ಸಮಾಧಾನಪಡಿಸಿದ ಚಿತನ್ ದೇವಿ "ಅಳಬೇಡ, ನಾವು ಬೇಗನೇ ಅಲ್ಲಿ ಸೇರುವವರಿದ್ದೇವೆ. ಹಾಂ ! ಈಗ ಹೇಳಿ ನಿಮಗೆ ಶಕುಂತಳೆಯ ಕಥೆ ಗೊತ್ತಾ ?"

"ಗೊತ್ತು" ಎಂದು ಅಣಕಿಸುವ ಹಾಗೆ ಹೇಳಿದ ಶತ್ರುಘ್ನ "ಚೆನ್ನಾಗಿ ಗೊತ್ತು. ನಾನು ಅದನ್ನು ನೂರು ಸಲ ಕೇಳಿದ್ದೇನೆ" ಎಂದನು.

ಶತ್ರುಘ್ನನ ಮಾತಿಗೆ ಚಿತನ್‌ದೇವಿ ರೇಗಲಿಲ್ಲ.

"ಸರಿ ಹಾಗಾದರೆ. ಗೊತ್ತಿಲ್ಲದವರಿಗೆ ಮತ್ತು ನೂರು ಸಲ ಕೇಳಿರುವವರಿಗೆ ಈಗ ಶಕುಂತಲಳ ಕಥೆಯನ್ನು ಹೇಳುತ್ತೇನೆ."

ಶತ್ರುಘ್ನ ಬೇಸರ ಬಂದವನಂತೆ ನಟಿಸಿದ. ಆದರೆ ಚಿತನ್ ದೇವಿ ಶಕುಂತಳೆ ಮತ್ತು ರಾಜನ ಸಂತೋಷ, ದುಃಖಗಳನ್ನು ಜೀವಂತವಾಗಿ ಬಣ್ಣಿಸುವುದನ್ನು ಮನಸ್ಸಿಟ್ಟು ಕೇಳಿದ. ಕಾಲ, ಸ್ಥಳ ಎಲ್ಲವನ್ನೂ ಮರೆತ.

ಚಿತನ್‌ದೇವಿಯ ಮಾತಿನ ಶಬ್ದವನ್ನುಳಿದು ಸುತ್ತಲೂ ನಿಶಬ್ದವಾದ ವಾತಾವರಣವಿತ್ತು. ಇದ್ದಕ್ಕಿದ್ದ ಹಾಗೆ ಶತ್ರುಘ್ನ ನಿಂತ. ರೈಲು ಹಳಿ ಕಂಪಿಸಲಿಲ್ಲವೇನು ?

ಶತ್ರುಘ್ನನ ಹುಬ್ಬುಗಂಟಿಕ್ಕಿದವು. ಹಾಗೆಯೆ ದೂರದೂರದತ್ತ ತನ್ನ ಮುಂದಿನ ಕತ್ತಲನ್ನು ಕಣ್ಣಿಂದ ಸೀಳಿ ನೋಡಲು ಪ್ರಯತ್ನಿಸಿದ. "ಷ್ಷ್, ಷ್ಷ್ ಯಾವುದೋ ರೈಲು ಬರುತ್ತಿದೆ ಎಂದನ್ನಿಸುತ್ತಿದೆಯಲ್ಲವೇ ?"

"ರೈಲು, ರೈಲು" ಮಕ್ಕಳು ಗಾಬರಿಯಿಂದ ಕೂಗಿಕೊಂಡರು.

"ಏನು ಹುಚ್ಚು ನಿಮ್ಮದು ! ಈ ಹೊತ್ತಿನಲ್ಲಿ ಯಾವ ರೈಲೂ ಈ ಮಾರ್ಗದಲ್ಲಿ ಹೋಗಿಲ್ಲ, ಹೋಗುವುದೂ ಇಲ್ಲ. ಶತ್ರುಘ್ನ, ಮಕ್ಕಳನ್ನು ಹೆದರಿಸಬೇಡ ಮತ್ತು ನನ್ನ ಕಥೆಗೆ ಅಡ್ಡಿ ತರಬೇಡ. ಹಾಂ ! ನಾನು ಏನು ಹೇಳುತ್ತಿದ್ದೆ... ಹಾಂ. ಹೌದು. ಶಕುಂತಳ ಅತ್ತಳು..." ಎಂದು ಚಿತನ್‌ದೇವಿ ಕಥೆ ಮುಂದುವರಿಸಿದಳು.

ಶತ್ರುಘ್ನ ತನ್ನ ಭುಜ ಕುಣಿಸಿದ. ಚಿತನ್‌ದೇವಿ ಹೇಳಿದ್ದು ಸರಿ ಇರಬಹುದು... ರಾತ್ರಿ 8 ಗಂಟೆಯ ಸಮಯದಲ್ಲಿ ಯಾವುದೇ ರೈಲು ಗಾಡಿಯೂ ಈ ಮಾರ್ಗದಲ್ಲಿ ಬಂದದ್ದನ್ನು ಆತ ಇಲ್ಲಿಯ ತನಕವೂ ಕೇಳಿರಲಿಲ್ಲವೆಂಬುದೂ ನಿಜ.

ಸ್ವಲ್ಪ ಸಮಯದ ನಂತರ ಅವರು ಫೂಲ್‌ಝೂರ್ ನಾಲೆಯ ಮೇಲಿನ ಕಿರಿದಾದ ಸೇತುವೆ ತಲುಪಿದರು. ಸೇತುವೆಯ ಎರಡೂ ಕಡೆಯ ಕಬ್ಬಿಣದ ಸಲಾಕೆಗಳ ಮೂಲಕ ಇದ್ದಕ್ಕಿದ್ದ ಹಾಗೆ ಪ್ರಚಂಡ ಗಾಳಿ ಬೀಸಲು ಪ್ರಾರಂಭವಾಯಿತು. ಅವರ ಕೂದಲನ್ನು ಚೆಲ್ಲಾಪಿಲ್ಲಿ ಮಾಡಿತು. ಚಳಿ ಹೆಚ್ಚಾಗಿ ತಣ್ಣಗೆ ಕೊರೆಯುತ್ತಿದ್ದ ಬೆರಳುಗಳಿಂದ ಮುಖ ಮುಟ್ಟಿದರೆ ನೋವಾಗುತ್ತಿತ್ತು. "ಎಲ್ಲರೂ ಒಂದೆಡೆ ಇರಿ" ಎಂದು ಚಿತನ್‌ದೇವಿ ಕೂಗಿಕೊಂಡಳು. ಆದರೆ ಅವಳ ಧ್ವನಿ ಗಾಳಿಯಲ್ಲಿ ತೇಲಿಹೋಯಿತು. ಪುಟ್ಟ

ನಿರ್ಮಲ್ ನಡುಗುತ್ತಾ ಶತ್ರುಘ್ನನ ಕೈಯನ್ನು ಇನ್ನೂ ಬಿಗಿಯಾಗಿ ಹಿಡಿದುಕೊಂಡಳು.

"ಬೇಗ ಬೇಗ ನಡೆಯಿರಿ" ಚಿತನ್ ದೇವಿ ಎಲ್ಲರನ್ನು ಅಟ್ಟಿಕೊಂಡು ಹೋಗಲು ಪ್ರಾರಂಭಿಸಿದಳು. ಎಲ್ಲರ ಕಾಲುಗಳೂ ಲಯಬದ್ಧವಾಗಿ ನೆಲವನ್ನು ತುಳಿಯುತ್ತಿದ್ದವು. ಶತ್ರುಘ್ನ ಮುಂದೆ ನಡೆದ. ಎಲ್ಲರೂ ಬೇಗ ಬೇಗ ಹೆಜ್ಜೆ ಹಾಕತೊಡಗಿದರು. ಅವರು ಸೇತುವೆಯ ಮಧ್ಯಭಾಗಕ್ಕೆ ಬಂದಿದ್ದರು. ಆಗ ಮತ್ತೊಮ್ಮೆ ಹಳಿಯ ಕಂಪನ ಪ್ರಾರಂಭವಾಯಿತು.

"ಸೇತುವೆ ಅಲ್ಲಾಡುತ್ತಿದೆ" ಎಂದು ಒಬ್ಬ ಹೆಂಗಸು ಕೂಗಿಕೊಂಡಳು.

"ಅಮ್ಮಾ ಸೇತುವೆ ಒಡೆದು ಹೋಗುತ್ತಿದೆ" ಎಂದು ಒಬ್ಬ ಹುಡುಗಿ ಚೀತ್ಕರಿಸಿದಳು.

"ಹುಚ್ಚುಚ್ಚಾಗಿ ಮಾತಾಡಬೇಡಿ" ಎಂದು ಅಬ್ಬರಿಸಿದ ಚಿತನ್ ದೇವಿ "ಅದು ಗಾಳಿ, ಗಾಳಿಯಷ್ಟೇ. ಬೇಗ ಬೇಗ ನಡೆಯಿರಿ" ಎಂದು ಹೇಳಿದಳು.

ಶತ್ರುಘ್ನ ಶಬ್ದವನ್ನು ಕೇಳಲು ಪ್ರಯಾಸಪಟ್ಟ. ಹಿಂದಿನಿಂದ ಅಥವಾ ಎದುರುಗಡೆಯಿಂದಲೋ ಬರುತ್ತಿರುವ ರೈಲಿನ ಶಬ್ದವಲ್ಲವೇ ಅದು ? ಮತ್ತೆ ಕತ್ತಲನ್ನು ಬೇಧಿಸಿ ನೋಡಲು ಪ್ರಯತ್ನ ಪಟ್ಟ, ಸಾಧ್ಯವಾಗಲಿಲ್ಲ. ಮತ್ತೊಮ್ಮೆ ಗಾಳಿ ಅವನ ಮುಖದ ಮೇಲೆ ಬೀಸಿತು.

ಅಲ್ಲಿ.... ಅದೋ ಅದೋ... ಅಲ್ಲಿ... ಕತ್ತಲಲ್ಲಿ ಏನೋ ಬರುತ್ತಲಿದೆ... ಬರುತ್ತಿತ್ತು ! ಶತ್ರುಘ್ನನಿಗೆ ಅತ್ತಣಿಂದ ತೇಲಿ ಬಂದ ಗಾಳಿಯಲ್ಲಿ ಅದರ ಬರುವಿಕೆಯ ಅನುಭವವಾಯಿತು. ರಭಸದಿಂದ ಧಾವಿಸುತ್ತಿತ್ತು. ರಾತ್ರಿಯ ಕತ್ತಲಿನ ರೆಕ್ಕೆಯ ಮೇಲೇರಿ ಬರುತ್ತಿದ್ದಂತೆ ಭಾಸವಾಯಿತು. ರೈಲು, ರೈಲು.

"ನಿರ್ಮಲ್, ಚಿತನ್ ದೇವಿ, ಎಲ್ಲರೂ ಸರಸರನೆ ಓಡಿ, ಓಡಿರಿ."

ಆದರೆ ಓಡಲು ಸಮಯ ಇರಲಿಲ್ಲ. ಅವನ ಎದುರಿಗೆ ಸುಮಾರು 50 ಗಜಗಳ ದೂರದಲ್ಲಿ ವೇಗವಾಗಿ ಎಂಜಿನ್ ಬರುತ್ತಿತ್ತು. ಅದು ಅವರ ಮೇಲೆಯೇ ಹೋಗುವುದು ಖಂಡಿತ. ಅವನಿಗೆ ಎಂಜಿನ್ ಬರುತ್ತಿರುವುದು ಗೊತ್ತಾಯಿತು. ಆದರೆ ಅದನ್ನು ನೋಡಲು ಸಾಧ್ಯವಾಗಲಿಲ್ಲ. ಅದೊಂದು ದೀಪವಿಲ್ಲದ ಪೆಡಂಭೂತ ಎಂಜಿನ್ನಾಗಿತ್ತು.

"ಧುಮುಕಿ, ಎಲ್ಲರೂ ಧುಮುಕಿ !"

ನಿರ್ಮಳನ್ನು ಎತ್ತಿಕೊಂಡು ಶತ್ರುಘ್ನ ಸೇತುವೆಯ ಕಂಪಿಸುತ್ತಿದ್ದ ಸಲಾಕಿಗಳಿಗೆ ಆತುಕೊಂಡ. ತನ್ನ ಮುಖವನ್ನು ಬಲಕ್ಕೆ ತಿರುಗಿಸಿ, ಹೊಗೆಯಾಡುತ್ತಿದ್ದ ಅಘಾತವಾದ ಕಪ್ಪು ಛಾಯೆ ಕತ್ತಲಿನಲ್ಲಿ ತಮ್ಮ ಕಡೆ ಬರುತ್ತಿರುವುದನ್ನು ಕಂಡ.

ಚಿತನ್‌ದೇವಿ ಜೋರಾಗಿ ಚೀತ್ಕರಿಸಿದ ಹಾಗೆ ಒಂದು ಕ್ಷಣ ಅವನಿಗೆ ಭಾಸವಾಯಿತು. ಅದೇ ಸಮಯದಲ್ಲಿ ಎಂಜಿನ್ನಿನ ಸದ್ದು ಎಲ್ಲವನ್ನೂ ಅಡಗಿಸಿ ಏನೂ ಕೇಳದಂತೆ ಮಾಡಿತು.

"ಅಯ್ಯೋ, ದೇವರೇ, ನಮ್ಮನ್ನು ರಕ್ಷಿಸು." ತನ್ನ ತೋಳುಗಳ ಮಧ್ಯ ನಡುಗುತ್ತಿದ್ದ ಪುಟ್ಟ ಹುಡುಗಿಯನ್ನು ಭದ್ರವಾಗಿ ಹಿಡಿದುಕೊಂಡು ತಣ್ಣಗೆ ಕೊರೆಯುತ್ತಿದ್ದ ಕಬ್ಬಿಣದ ಸಲಾಕೆಗಳ ಮೇಲೆ ಪೂರ್ಣವಾಗಿ ಆಶ್ರಯ ಪಡೆದ. ವೇಗವಾಗಿ ಹೋಗುತ್ತಿದ್ದ ಎಂಜಿನ್ ಅವನನ್ನು ಎತ್ತಿ ಬಿಸಾಡುವಂತೆ ಆಯಿತು.

ಕತ್ತಲ ದೆವ್ವದಂತೆ ಹೇಗೆ ಇದ್ದಕ್ಕಿದ್ದಂತೆ ಬಂದಿತೊ ಹಾಗೆಯೆ ಆ ಒಂಟಿ ಎಂಜಿನ್ನು ಕತ್ತಲಲ್ಲಿ ಕರಗಿಹೋಯಿತು. ಅನಂತರ ಕವಿದ ಮೌನ ಹೆದರಿಸುವಂತಿತ್ತು! ಗಾಬರಿಹುಟ್ಟಿಸುವ ನೀರವತೆ! ಯಾರೂ ಏಕೆ ಕೂಗುತ್ತಿಲ್ಲ, ಸದ್ದೆ ಇಲ್ಲವಲ್ಲ... ಏನಾಯ್ತು?''

ನಿರ್ಮಲ ಕಿರಚಿದಳು. ''ಅಮ್ಮ...ಅಮ್ಮಾ...'' ಏನೂ ಉತ್ತರ ಬರಲಿಲ್ಲ.

ಈ ವೇಳೆಗೆ ಚಿತನ್‌ದೇವಿ ಆ ರೈಲ್ವೆ ಎಂಜಿನ್ನು, ಡ್ರೈವರ್ ಅಥವಾ ಇಬ್ಬರನ್ನೂ ಮನಸಾರೆ ಬೈದು, ಶಾಪ ಹಾಕುವಳೆಂದು ಶತ್ರುಘ್ನ ನಿರೀಕ್ಷಿಸಿದ್ದ. ಆದರೆ ಮೌನ ಮುರಿಯುವ ಯಾವುದೇ ಒಂದು ಮಾತು ಕೂಡ ಕೇಳುತ್ತಿಲ್ಲ. ರಾತ್ರಿಯ ಸ್ತಬ್ಧತೆ, ಮೌನ, ಸ್ಮಶಾನ ಸದೃಶ ಮೌನ ಆವರಿಸಿತು.

''ಚಿತನ್ ದೇವಿ, ಬಾಬ್ಲಿ, ಸುಕ್ಕುಬಾಯಿ'' ಎಂದು ಒಬ್ಬೊಬ್ಬರ ಹೆಸರನ್ನೂ ಶತ್ರುಘ್ನ ಕೂಗಿದ. ಆದರೆ ಯಾರೂ ಉತ್ತರಿಸಲಿಲ್ಲ.

ಅವನು ಹೆದರಿದ. ಏನಾಯಿತು? ಎಲ್ಲರೂ ಎಲ್ಲಿದ್ದಾರೆ?

ಇದ್ದಕ್ಕಿದ್ದಂತೆಯೆ ಬಿಕ್ಕುವಿಕೆಯ ಸದ್ದು ಕೇಳಿಬಂತು. ನೋವಿನಿಂದ ನಡುಗುತ್ತ ಕೀರುವ ಸ್ವರ.

''ಬಾಬ್ಲಿ, ಅದು ಬಾಬ್ಲಿ'' ಎಂದು ಕತ್ತಲೆಯ ಕಡೆ ನೋಡಿ ಕೂಗಿದ. ''ನೀನು ಎಲ್ಲಿದ್ದೀಯಾ?''

ಶತ್ರುಘ್ನನ ಎದೆಯಲ್ಲಿ ಮುಖ ಹುದುಗಿಸಿಕೊಂಡು ನಿರ್ಮಲ ''ನಾನು ಮನೆಗೆ ಹೋಗಬೇಕು.'' ಎಂದಳು.

''ಆಗಲಿ, ನಿರ್ಮಲ. ಹೋಗೋಣ.'' ಶತ್ರುಘ್ನ ಮೆದುವಾಗಿಯೆ ಹೇಳಿದ. ''ಹೋಗೋಣ. ಆದರೆ ಸ್ವಲ್ಪ ತಡಿ, ಏನಾಗಿದೆ ಎಂಬುದನ್ನು ಮೊದಲು ನೋಡೋಣ.'' ನಿರ್ಮಲಳನ್ನು ತನ್ನ ಸೊಂಟದ ಮೇಲೆತ್ತಿಕೊಂಡ ಶತ್ರುಘ್ನ ರೈಲ್ವೆ ಹಳಿಯ ಕಡೆ ನಡೆದ. ಒಂದು ಮರದ ಅಡ್ಡಪಟ್ಟಿಯ ಮೇಲೆ ಕಾಲಿಡುತ್ತಿದ್ದಂತೆ ಅವನ ಕಣ್ಣುಗಳು ಗಾಬರಿಯಿಂದ ಅಗಲವಾದವು. ಆ ಪುಟ್ಟ ಹುಡುಗಿ ಬಾಬ್ಲಿ ಅಲ್ಲೇ ನೋವಿನಿಂದ ಅರಚುತ್ತಿದ್ದಳು.

''ಬಾಬ್ಲಿ, ಬಾಬ್ಲಿ'' ಎಂದು ಮೃದುವಾಗಿ ಕೂಗಿದ.

''ಅಯ್ಯೋ ದೇವರೇ'' ಎಂದು ಕೂಗುತ್ತಾ ಕತ್ತಲಲ್ಲಿ ತಡಕಾಡಲು ಪ್ರಾರಂಭಿಸಿದ. ಅವನ ಬರಿ ಕಾಲಿಗೆ ಏನೋ ಸಿಕ್ಕಿ ಅದು ಉರುಳಿ ಹೋದಂತಾಯಿತು. ಆ ಕ್ಷಣ ಅವನ ಜಂಗಾಬಲವೇ ಉಡುಗಿ ಹೋದಂತಾಯಿತು. ಇಲ್ಲ, ಅವನು ಧೈರ್ಯ ಕಳೆದುಕೊಳ್ಳುವ ಹಾಗಿಲ್ಲ. ಮಕ್ಕಳನ್ನು ಅವನು ರಕ್ಷಿಸಬೇಕು. ಅವನು ಬಗ್ಗಿ ಹಳಿಯ ನಡುವಣ ಅಡ್ಡಪಟ್ಟಿ ಮತ್ತು ಜಲ್ಲಿಗಳಲ್ಲಿ ಹುಡುಕಲಾರಂಭಿಸಿದ. ಹುಡುಕುತ್ತಾ ಇದ್ದಂತೆ ನೋವಿನಿಂದ ಕಾಲನ್ನು ಜಾಡಿಸುತ್ತಿದ್ದ ಪುಟ್ಟ ಮಗುವಿನ ಶರೀರ ಕೈಗೆ ತಗುಲಿತು. ಮಗುವನ್ನು ನಿಧಾನವಾಗಿ ಎತ್ತಿಕೊಂಡು ಭುಜದ ಮೇಲೆ ಹಾಕಿಕೊಂಡ. ''ಬಾಬ್ಲಿ, ಬಾಬ್ಲಿ'' ಎಂದು ಸಮಾಧಾನಪಡಿಸಿದ. ಅವಳ ಬೆನ್ನಿನ ಮೇಲೆ ಕೈ ಬೆರಳುಗಳನ್ನು ಆಡಿಸಿದಾಗ ರಕ್ತ ಸುರಿಯುತ್ತಿದ್ದ ದೊಡ್ಡ ಗಾಯ ಆಗಿರುವುದು ಅವನಿಗೆ ತಿಳಿಯಿತು.

ಅವನಿಗೊಮ್ಮೆಲೇ ತಲೆ ಸುತ್ತಿ ಬಂದಂತಾಯಿತು. ಆದರೆ ಧೈರ್ಯವನ್ನು ತಂದುಕೊಂಡ. ಒಂದು

ಕ್ಷಣ ಕೂಡ ತಡ ಮಾಡದೆ ಕೂಡಲೆ ಇಲ್ಲಿಂದ ಆದಷ್ಟು ಬೇಗ ಓಡಬೇಕೆಂದು ಅವನಿಗೆ ಹೊಳೆಯಿತು. ಆದರೆ ಸಾಧ್ಯವಾಗಲಿಲ್ಲ. "ಚಿತನ್‌ದೇವಿ" ಎಂದು ಕೂಗಿದ ಅವನು ಆ ಅಪರಾತ್ರಿಯಲ್ಲಿ ಇನ್ನೊಮ್ಮೆ ಗಟ್ಟಿದನಿಯಲ್ಲಿ ಒರಲಿದ: "ಸಕ್ಕೂಬಾಯಿ, ಚಿತನ್‌ದೇವಿ."

ಗಾಳಿ ಅವರ ಹೆಸರುಗಳನ್ನು ಕೊಂಡೊಯ್ಯಿತಷ್ಟೇ ವಿನಹ ಯಾವುದೇ ಉತ್ತರವೂ ಬರಲಿಲ್ಲ. "ಬಾಮ್ಮ ನಿರ್ಮಲ.... ನನ್ನ ಕೈ ಹಿಡಿದುಕೊ." ಶತ್ರುಘ್ನ ನಡುಗುವ ಸ್ವರದಲ್ಲಿ ಹೇಳಿದ: "ನಮಗೆ ಈಗ ಸಹಾಯದ ಅಗತ್ಯವಿದೆ." ಆದರೆ ಸಹಾಯ ಒದಗಿಬಂದರೂ ಅದು ಬಹಳ ತಡವಾಗಿಯೇ ಬರುವುದು ಎಂಬುದನ್ನು ಅವನು ಅರಿತಿದ್ದ.

ಅವನು ಸಮೀಪದ ಗ್ರಾಮ ಮುಂಗ್ರಿಯ ಕಡೆಗೆ ತನ್ನ ದೀರ್ಘ ಕಾಲುನಡಿಗೆಯ ಪ್ರಯಾಣ ಶುರು ಮಾಡಿದ. ರೈಲ್ವೆ ಹಳಿಯನ್ನು ಬಿಟ್ಟು ರಸ್ತೆಯನ್ನರಸುತ್ತ ನಡೆದ. ನಿರ್ಮಲಳ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು, ಇನ್ನೊಂದು ಕೈಯಿಂದ ಗಾಯಗೊಂಡ ಮಗು ಬಾಬ್ಲಿಯನ್ನು ತನ್ನ



ಎದೆಗೆ ಅವುಚಿಕೊಂಡು, ಕತ್ತಲಲ್ಲಿ ದಾಪುಗಾಲು ಹಾಕುತ್ತ ಮುಂದೆ ಸಾಗಿದ. ಮರದ ರೆಂಬೆಯ ತುದಿಗಳು ಅವನ ಮುಖಕ್ಕೆ ಬಡಿದವು, ತೋಳುಗಳ ಮೇಲೆ ಚುಚ್ಚಿದವು, ಕಾಲಿಗೆ ಅಡ್ಡ ಬಂದವು. ಅವನು ಎಡವಿ ಬಿದ್ದ. ನಿರ್ಮಲಳೂ ಅವನೊಂದಿಗೆ ಬಿದ್ದಳು.

ಮತ್ತೆ ತನ್ನನ್ನೆ ತಾನೆಳೆದುಕೊಂಡು ಮೇಲೆದ್ದ. ಬಿದ್ದು ನಡುಗುತ್ತಲಿದ್ದ ಹುಡುಗಿಯನ್ನು ನಿಲ್ಲಿಸಿದ. ಮತ್ತೆ ತೂರಾಡುತ್ತ ಅವರು ನಡೆದರು. "ಏನಾಗಿಲ್ಲ, ಏನಾಗಿಲ್ಲ ನಿರ್ಮಲ" ಎಂದು ಶತ್ರುಘ್ನ ಪ್ರಯಾಸದಿಂದ ಹೇಳಿದ.

ಗೂಬೆಯ ಕೂಗು ಶತ್ರುಘ್ನನನ್ನು ಹೆದರಿಸಿ, ನಡುಗಿಸಿತು. ರಾತ್ರಿ ಇಷ್ಟೊಂದು ಕಪ್ಪಾಗಿದ್ದು, ಅಂಜಿಕೆ ಮೂಡಿಸುವಂಥದ್ದಾಗಿರುವುದೆಂದು ಅವನಿಗೆ ಈ ವರೆಗೆ ತಿಳಿದಿರಲಿಲ್ಲ.

ಯಾವುದೋ ಏನೋ ತನ್ನ ಮೃದುವಾದ ಕಪ್ಪು ರೆಕ್ಕೆಗಳನ್ನು ಚಾಚಿ, ಅವನ ಮೇಲೆರಗಿತು. ಕುಗ್ಗಿ ಹಿಂಜರಿದ ಶತ್ರುಘ್ನ: "ಬಾವುಲಿ, ಅಷ್ಟೆ ತಾನೆ" ಎಂದು ಸಮಾಧಾನಪಟ್ಟ. ಎತ್ತರದ ಹುಲ್ಲಿನಲ್ಲಿ ಮರ್ಮರ ಶಬ್ದ. ಅವನು ಅಲ್ಲೇ ನಿಂತು ಸುತ್ತ ಆಲಿಸಿದ. ರಾತ್ರಿಯಲ್ಲಿ ಅನೇಕ ವಿಚಿತ್ರ ಶಬ್ದಗಳು ಕೇಳಿಬರುತ್ತಿದ್ದವು. ನರಿಗಳು ಊಳಿಡುವ ಸದ್ದು, ಕತ್ತೆ ಕಿರುಬ ಅಣಕಿಸಿ, ನಗುತ್ತಿರುವಂಥ ಶಬ್ದ. ಸುತ್ತಲೂ ಅಪಾಯ ಹರಡಿರುವಂತೆ ಭಾಸವಾಯಿತು. ವಿಷಪೂರಿತ ಹಾವುಗಳು, ಪ್ರಾಣಹಾನಿ ಚೇಳುಗಳು, ಕಾಡು ನಾಯಿ, ತೋಳ, ಹುಲಿ... ಈ ಎಲ್ಲಾ ಯೋಚನೆಗಳನ್ನು ಬದಿಗೊತ್ತಿಡಲು ಪ್ರಯತ್ನಿಸಿದ. ಅವನ ನಿರ್ಧಾರವನ್ನು ನಿರ್ಬಲಗೊಳಿಸುವ ಎಲ್ಲವನ್ನೂ ಮರೆತ. ಅವನು ಮುಂಗ್ರಿ ತಲುಪಬೇಕು.

ಅವನು ಕೊನೆಗೂ ಮುಂಗ್ರಿ ಗ್ರಾಮ ತಲುಪಿದ. ಅತಿಯಾದ ಬಳಲಿಕೆಯಿಂದ ಇನ್ನೇನು ಬೀಳುವಂತೆ ತೂರಾಡುತ್ತಿದ್ದ ಶತ್ರುಘ್ನ ಗ್ರಾಮದಲ್ಲಿ ಮೊದಲು ಸಿಕ್ಕಿದ ಗುಡಿಸಲಿನ ಬಾಗಿಲನ್ನು ತಟ್ಟಿದ. "ಸಹಾಯ... ಯಾರಾದರೂ... ನೆರವಿಗೆ ಬನ್ನಿ... ಡಾಕ್ಟರ್... ಮಗು.... ಮಗು ಸಾಯುತ್ತಿದೆ !...."

ತಕ್ಷಣವೇ ಹಳ್ಳಿಗೆ ಹಳ್ಳಿಯೆ ಅವನ ಸುತ್ತ ನೆರೆಯಿತು. "ಏನಾಯ್ತು ಮಗು... ಏನಾಯ್ತು ?"

"ಅವನ ಮೈಯೆಲ್ಲಾ ರಕ್ತ. ನಿನಗೆ ಗಾಯವಾಗಿದೆಯೇ ?"

"ನನಗಲ್ಲ, ಈ ಮಗುವಿಗೆ. ಅದನ್ನು ಉಳಿಸಿ. ನಾವು ಹತ್ತುಜನ ಇದ್ದೆವು, ಈಗ ಮೂವರು ಮಾತ್ರ. ಏನಾಯಿತೊ ನನಗೇ ಗೊತ್ತಿಲ್ಲ... ಎಷ್ಟೊಂದು ರಕ್ತ ಇತ್ತು .. ಬಹುಶಃ ಎಲ್ಲರೂ ..." ಅವನ ಕಾಲು ಹಾಗೇ ಕುಸಿದುಹೋದವು. ಗ್ರಾಮದ ಪಟೇಲನ ತೋಳಿನಲ್ಲಿ ಅವನು ಕುಸಿದುಬಿದ್ದದ್ದಷ್ಟೆ. ಹಾಗೇ ಕತ್ತಲು ಕವಿದು ಮುಳುಗಿದಂತೆ... ಪ್ರಜ್ಞಾಹೀನನಾಗಿಬಿಟ್ಟ.

* * * *

ಮುಂಗ್ರಿ ಹಳ್ಳಿಯವರೆಲ್ಲರೂ ರೈಲ್ವೆ ಹಳಿಯ ಮೇಲೆ ಹಾದು, ಮುಂದೆ ನಡೆದರು. ಮಧ್ಯಪ್ರದೇಶ ಪ್ರಾಂತ್ಯದ ರಾಯಘಢದ ಹಾದಿಯೆಡೆ ಅವರು ನಡೆಯುತ್ತಿದ್ದರು. ಯಾರೂ ಮಾತಾಡುತ್ತಿರಲಿಲ್ಲ

ಆ ಹುಡುಗ ಅರ್ಥಂಬರ್ಧ ಹೇಳಿದ್ದ ಮಾತುಗಳು ಅವರ ಮನದಲ್ಲಿ ಗುಯ್‌ಗುಟ್ಟುತ್ತಿದ್ದವು.

ಎಲ್ಲರೂ ಫೂಲ್‌ಝೂರ್ ತೊರೆಯ ಸೇತುವೆ ತಲುಪಿದಾಗ, ಲಾಟೀನು ಬೆಳಕುಗಳನ್ನು ದೊಡ್ಡದು ಮಾಡಿದರು. ಅವರು ಕಂಡ ದೃಶ್ಯ ಎಲ್ಲರ ಮೈ ರಕ್ತವನ್ನೂ ಹೆಪ್ಪುಗಟ್ಟಿಸುವಂತೆ ಇತ್ತು. ಮರದ ದಿಮ್ಮಿಗಳ ನಡುವೆ, ರಕ್ತದ ಮಡುವಿನಲ್ಲಿ, ಛಿದ್ರ ಛಿದ್ರವಾದ ಏಳು ಜನರ ಮೃತಶರೀರಗಳು ಬಿದ್ದಿದ್ದವು.

ಲಾಟೀನಿನ ಬೆಳಕನ್ನು ತಗ್ಗಿಸಿದ ಗ್ರಾಮಸ್ಥರು ದುಃಖದಿಂದ ತಮ್ಮ ಮುಖಗಳನ್ನು ಬೇರೆಡೆಗೆ ತಿರುಗಿಸಿದರಷ್ಟೆ.

"ಈ ಘೋರ ಅಪಘಾತ ಹೇಗಾಯಿತು" ಎಂದು ಆಶ್ಚರ್ಯಪಟ್ಟ ಗ್ರಾಮದ ಪಟೇಲ "ನಿನಗೆ ಶೀಟಿಯ ಶಬ್ದ ಕೇಳಿಸಲಿಲ್ಲವೇ" ಎಂದು ಶತ್ರುಘ್ನನನ್ನು ಕೇಳಿದ.

"ಚಾಲಕ ಶೀಟಿ ಬಾರಿಸಲಿಲ್ಲ, ಇಂಜಿನ್ನಿನ ದೀಪವೂ ಇರಲಿಲ್ಲ."

"ಇಂಜಿನ್ನಿನ ದೀಪ ಕೆಟ್ಟು ಹೋಗಿದ್ದಿರಬಹುದು."

"ದೀಪವಿಲ್ಲದ ಒಂದು ಒಂಟಿ ಇಂಜಿನ್" ಗೊಣಗಿದ ಒಬ್ಬ ಗ್ರಾಮಸ್ಥ. "ಒಂದು ಸಣ್ಣ ತಾಂತ್ರಿಕ ಲೋಪದಿಂದ ಇಷ್ಟೊಂದು ದೊಡ್ಡ ಅಪಘಾತ ಆಗಬಹುದು!"

"ಅದು ಸಣ್ಣ ಊರುಗಳ ಮಧ್ಯ ಓಡಾಡುವ ಷಟ್ಲ್ ಗಾಡಿ ಆಗಿದ್ದಿರಬಹುದು. ಆದರೆ ಅದೊಂದು ಕುರುಡ ರಾಕ್ಷಸನಂತಿತ್ತು."

"ಇಂಜಿನ್ನಿನ ಶಬ್ಧ ಕೇಳಿಸಲಿಲ್ಲವೇ, ನಿನಗೆ ?"

"ಹೌದು, ಕೇಳಿಸಿತು, ಆದರೆ ಇತರರಿಗೆ ಕೇಳಿಸಲಿಲ್ಲ. ಹಾಗೇನಾದರೂ ಕೇಳಿಸಿದ್ದರೂ, ಅದು ಬಹಳ ತಡವಾಗಿ ಕೇಳಿಸಿರಬಹುದು." ಶತ್ರುಘ್ನ ತನ್ನ ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಅಳಲಾರಂಭಿಸಿದ.

"ಅಳಬೇಡ, ಹುಡುಗ, ನಿನ್ನದೇನೂ ತಪ್ಪಿಲ್ಲ. ನೀನು ನಿನ್ನ ಕೈಲಾಗದಷ್ಟು ಮಾಡಿದ್ದೀಯ, ನಮ್ಮೆಲ್ಲರಿಗಿಂತ ಹೆಚ್ಚಾಗಿ." ತನ್ನ ಎಡಗಡೆ ನಿಂತಿದ್ದ ಒಬ್ಬ ಮನುಷ್ಯನಿಗೆ ಗ್ರಾಮದ ಪಟೇಲ ಹೇಳಿದ: "ಹುಡುಗನನ್ನು ಮನೆಗೆ ಕರೆದುಕೊಂಡು ಹೋಗು ಬಹಾದ್ದೂರ್ ಲಾಲ್. ಹೋಗಿ ಬಾ ಹುಡುಗ, ದೇವರು ನಿನ್ನನ್ನು ಕಾಪಾಡಲಿ."

ಶತ್ರುಘ್ನ ಮತ್ತು ಬಹಾದ್ದೂರ್ ಲಾಲ್ ಅಲ್ಲಿಂದ ಹೊರಟರು. ಮೌನವಾಗಿ ಮುಂಗ್ರಿಗೆ ಹಿಂತಿರುಗಿದರು. ಸಾವು ಅವರ ಜೊತೆಯಲ್ಲೇ ನಡೆಯುತ್ತಿರುವಂತೆ ಅವರಿಗೆ ಭಾಸವಾಗುತ್ತಿತ್ತು.

# ದಯಾಮಯಿ ಮೇರಿ, ನಮ್ಮನ್ನು ರಕ್ಷಿಸು

ನಾನೆಂದೂ ಆ ದಿನವನ್ನು ಮರೆಯುವುದಿಲ್ಲ ಶನಿವಾರ, ಫೆಬ್ರವರಿ 22, 1965. ಇಷ್ಟು ವರ್ಷಗಳ ನಂತರ ಇಂದೂ ಸಹ, ನನ್ನ ಕಿವಿಯಲ್ಲಿ, ಅಂದು ಹತಾಶರಾಗಿ ಸಾಯುತ್ತಿದ್ದವರ ಚೀರಾಟ ಕೇಳಿಸುತ್ತಲಿದೆ. ಅಸಹಾಯಕತೆಯಿಂದ ಕಂಪಿಸುತ್ತಿದ್ದ ಮಕ್ಕಳ ಆರ್ತಸ್ವರ, "ದೇವರ ತಾಯಿ ಮೇರಿ, ನಮ್ಮ ಮೇಲೆ ಕರುಣೆ ತೋರು" ಎಂದು ಸಾಯುತ್ತಿದ್ದವರು ಸಲ್ಲಿಸುತ್ತಿದ್ದ ಪ್ರಾರ್ಥನೆಯನ್ನು ಛಿದ್ರಗೊಳಿಸಿ ಹರಿದುಹಾಕುತ್ತಿದ್ದ ಬೀಸುಗಾಳಿ, ಇಂದಿಗೂ ಮರೆಯಲಾಗದ ದೃಶ್ಯ.

ನನಗೆ ಯಾವಾಗಲೂ ನೆನಪಾಗುವುದೆಂದರೆ, ನನ್ನ ತಾಯಿಯ ಭಯಗ್ರಸ್ತ ಕಣ್ಣುಗಳು. ಅವಳು ತನ್ನ ತೋಳುಗಳಲ್ಲಿ ನನ್ನನ್ನು ಸೆಳೆದು, ಚಿಕ್ಕ ಮಗುವನ್ನು ತೂಗುವಂತೆ ತೂಗಿ "ಮಗಳೇ, ದೇವರ ಅನುಗ್ರಹದಿಂದ ನೀನು ಬದುಕಿದ್ದೀಯ. ಆ ಮೇರಿ ತಾಯಿ ನನ್ನ ಪ್ರಾರ್ಥನೆಯನ್ನು ಸ್ವೀಕರಿಸಿ ನಿನ್ನನ್ನು ಆಶೀರ್ವದಿಸಿದಳು" ಎಂದಳು. ಆ ನೋವಿನ ಗಳಿಗೆಯಲ್ಲಿ ನಾನೇನು ಮಾಡಬೇಕೆಂದಿದ್ದೇನೊ ಅದನ್ನು ಮನಸಾರೆ ಮಾಡಿದೆ. ನನ್ನ ಅಮ್ಮನ ತೋಳಲ್ಲಿ ಮುಖ ಹುದುಗಿಸಿ ಅತ್ತೆ. ನನ್ನಮ್ಮ ಮಂಡಿಯೂರಿ ಕುಳಿತು, ನನ್ನ ಕಾಲುಗಳಿಗೆ ತೈಲ ಹಚ್ಚಿ ಸ್ನಾನ ಮಾಡಿಸಿದಳು. ಒರಿಸ್ಸಾದ ಝುನ್‌ಮೀರ್ ಪ್ರಾಂತದಲ್ಲಿ ಸಾವಿನಿಂದ ಪಾರಾಗಿ ಬಂದವರಿಗೆ ಈ ರೀತಿ ಅಭ್ಯಂಜನ ಮಾಡಿಸುವುದು ಅಲ್ಲಿನ ಪದ್ಧತಿ.

* * * *

ನನ್ನ ತಾಯಿ ಹಣೆಯ ಮೇಲೆ ಮುತ್ತಿಟ್ಟು "ಹೋಗಿ ಬಾ ಫೆಲಿಸಿಟಸ್" ಎಂದು ಹೇಳಿದರು. "ನನಗೂ ಬರಲು ಇಷ್ಟ ಎಂದು ನೀನು ಬಲ್ಲೆ. ಆದರೆ ಮಕ್ಕಳನ್ನು ಬಿಟ್ಟು ಬರಲು ಸಾಧ್ಯವಿಲ್ಲ. ತಂದೆಯವರಿಗೆ ಹೊಲದಲ್ಲಿ ನೆರವಾಗಬೇಕು. ಹೋಗಿ ಬಾ ಮಗು. ದೇವರು ನಿನ್ನನ್ನು ಆಶೀರ್ವದಿಸಲಿ. ಸದಾಕಾಲವೂ ನಿನ್ನನ್ನು ರಕ್ಷಿಸಲಿ" ಎದು ಹಾರೈಸೇ ಬೀಳ್ಕೊಟ್ಟರು.

"ಹೋಗಿ ಬರುತ್ತೇನೆ" ಎಂದು ತಾಯಿಗೆ ಹೇಳಿದೆ. ಆ ಕ್ಷಣದಲ್ಲಿ ಅಮ್ಮನೂ ನನ್ನ ಸಂಗಡ ಬರಬಹುದಿತ್ತೆಂದೆನಿಸಿತು. ನಾವು ಹೋಗುತ್ತಿದ್ದುದು ಕೆಸರಾಳ್ ಎಂಬ ಗ್ರಾಮಕ್ಕೆ. ಅದು ನದಿಯಾಚೆ

ಐದು ಮೈಲಿ ಕೆಳಗೆ ಇದೆ. ಅಮ್ಮ ಬರದೆ ಇದ್ದುದೆ ಒಳ್ಳೆಯದಾಯಿತು, ದೇವರು ಕಾಪಾಡಿದ ಎಂದು ಈಗ ನನಗನ್ನಿಸುತ್ತದೆ.

"ಹೇಯ್, ಫೆಲಿಸಿ !" ನನ್ನನ್ನು ಕೂಗುವ ಪರಿಚಿತ ಧ್ವನಿ ಕೇಳಿಸಿತು. "ಏನು ಒಳ್ಳೆ ಬಟ್ಟೆ ಹಾಕಿಕೊಂಡು ಶೃಂಗಾರ ಮಾಡಿಕೊಂಡು ಹೊರಟಿದ್ದೀಯ ?"

ಅವಳು ಇನ್ನಾರೂ ಅಲ್ಲ, ನನ್ನ ಸ್ನೇಹಿತೆ ಫಿಲೊಮಿನಾ. ಅವಳನ್ನು ನಿರ್ಲಕ್ಷಿಸಲು ಯೋಚಿಸಿದೆ. ಆದರೆ ಅವಳು ನನ್ನ ಆಪ್ತ ಸ್ನೇಹಿತೆ. ಆದ್ದರಿಂದ ಅವಳನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. "ಏಯ್ ಫೆಲಿಸಿ !" ಎಂದು ಕೂಗಿಕೊಂಡು ಹಿಂದಿನಿಂದ ನನ್ನನ್ನು ಹಿಡಿದು ಅವಳ ಕಡೆಗೆ ತಿರುಗಿಸಿದಳು. "ಆ ಕಿತ್ತಳೆ ಬಣ್ಣದ ಸೀರೆಯಲ್ಲಿ ನೀನು ತುಂಬ ಚೆನ್ನಾಗಿ ಕಾಣಿಸುತ್ತೀಯ. ಸೀರೆಗೆ ತಕ್ಕ ರವಿಕೆ ಕೂಡ ! ಕಿವಿಗಳಿಗೆ ಹೊಸ ಓಲೆ. ನಿಜವಾಗಿಯೂ ಅವು ಬೆಳ್ಳಿಯವೇನು ?" ಫಿಲೋಮಿನಾ ಅವುಗಳ ಸರಪಳಿಯನ್ನು ಮೆಲ್ಲಗೆ ಎಳೆದು, ತುಂಟತನದ ನಗೆ ಬೀರಿ ಅವುಗಳೊಂದಿಗೆ ಆಟವಾಡಿದಳು. ನಾನು ಹುಸಿಮುನಿಸು ತೋರಿಸಿ ಅವಳ ಬೆರಳುಗಳನ್ನು ಹಿಂದಕ್ಕೆ ಸರಿಸಿದೆ. "ಫಿಲೋ.... ! ಸರಿಯಾಗಿ ನಡಕೊ. ನೀನೇನೂ ಮಗು ಅಲ್ಲ. ಹದಿನಾರು ವರ್ಷದ ಹುಡುಗಿ, ತಿಳಿಯಿತೇ !" ಆದರೆ ತಕ್ಷಣ ನಾವು ಹದಿನಾರರ "ಹೆಂಗಸರ" ಹಾಗಿರದೆ ಕಿಟಾರನೆ ಕೂಗಿದೆವು: "ನೋಡು ದೋಣಿ ಹೊರಡುವುದರಲ್ಲಿದೆ. ಓಡು. ಇಲ್ಲದಿದ್ದರೆ ನಾವು ಇಲ್ಲೇ ಇರಬೇಕಾಗುತ್ತದೆ."

ನಾವಿಬ್ಬರೂ ಸೀರೆಗಳನ್ನು ಮೇಲೆತ್ತಿಕೊಂಡು ಕಡಲ ದಂಡೆಯ ಕಡೆ ಓಡಿದೆವು. ನಮ್ಮ ಜಡೆಗಳು ಬೆನ್ನಮೇಲೆ ಕುಪ್ಪಳಿಸುತ್ತಿದ್ದವು. ಗಾಜಿನ ಬಳೆಗಳು ಗಿಲಿಗಿಲಿ ಶಬ್ದ ಮಾಡುತ್ತಿದ್ದುವು. ಆಗ ತಾನೆ ನದಿಯ ದಂಡೆ ಬಿಟ್ಟು ಹೊರಡುತ್ತಿದ್ದ ದೋಣಿಯೊಳಗೆ ಹಾಗೆಯೆ ನೆಗೆದುಬಿಟ್ಟೆವು. ನಮ್ಮವರಿಗೆಲ್ಲ ಮುಂದಿನ ಸೋಮವಾರದವರೆಗೂ 'ಗುಡ್‌ಬೈ' ಹೇಳಿದೆವು, ಕೂಗಿಕೊಂಡೆವು. ನಮ್ಮ ದೃಷ್ಟಿಯಿಂದ ದೂರವಾಗುವವರೆಗೆ ಕೈ ಆಡಿಸಿ ವಿದಾಯ ಹೇಳುತ್ತಿದ್ದೆವು. ನಾವು ಕೆಸರಾಳ್ ಗ್ರಾಮದೆಡೆ ಪಯಣ ಪ್ರಾರಂಭಿಸಿದ್ದೆವು. ಅಲ್ಲಿ ನಮ್ಮ ಒಲವಿನ ಮಾತೆ ಏಸು ತಾಯಿ ಮೇರಿಯ ಉತ್ಸವದಲ್ಲಿ, ಮೆರವಣಿಗೆಯಲ್ಲಿ ಭಾಗವಹಿಸಲು ನಾವು ಸಂಭ್ರಮದಿಂದ ಹೊರಟಿದ್ದೆವು.

ದೋಣಿ ನೀರನ್ನು ಸೀಳುತ್ತ ನಿರಾಳವಾಗಿ ಸಾಗಿತು. ಪಡುವಣ ದಿಸೆಯಲ್ಲಿ ಅಸ್ತಮಿಸುತ್ತಿದ್ದ ಸೂರ್ಯ, ದಿಗಂತವನ್ನು ಕಿತ್ತಳೆ ರಂಗಿನಿಂದ ಚಿತ್ರಿಸಿದ್ದ. ಗಾಳಿ, ತನ್ನ ಮೃದು ಹಸ್ತದಿಂದ ತಾಳೆ ಮರಗಳನ್ನು ಸ್ಪರ್ಶಿಸಿ, ನದಿಯ ಎರಡು ಕಡೆಗಳಲ್ಲೂ ಇದ್ದ ಗದ್ದೆಗಳ ಹುಲುಸಾದ ಭತ್ತದ ತೆನೆಗಳ ಮೇಲೆ ಹಾಯುತ್ತಿತ್ತು. ದೋಣಿಯಲ್ಲಿದ್ದ ತೊಂಬತ್ತು ಜನ ಗಂಡಸರು, ಹೆಂಗಸರು, ಮಕ್ಕಳೆಲ್ಲ ಕೈಮುಗಿದು, ದೇವರ ವೈಭವವನ್ನು ಕುರಿತು ಹಾಡುತ್ತಿದ್ದರು. ಫಿಲೋಮಿನಾ ಹಾಗೂ ನಾನೂ ಅವರೆಲ್ಲರ ಜೊತೆಗೂಡಿ ಮನಸಾರ ಹಾಡಿದೆವು. ನದಿಯಾಚೆ ಬೆಳೆದು ನಿಂತಿದ್ದ ಕಪ್ಪು ಮರಗಳ ಹಿಂದಿನಿಂದ ಕತ್ತಲು ಸುಳಿಯುತ್ತಿತ್ತು. ಆದರೆ, ಅದು ರಾತ್ರಿಯ ಕತ್ತಲೆಯೇನು ? ನಾನು ಪ್ರಶ್ನಾರ್ಥಕವಾಗಿ ದೋಣಿ ನಡೆಸುತ್ತಿದ್ದ ದೃಢಕಾಯ ಮುದುಕ ಅಂಬಿಕನ ಕಡೆ ನೋಡಿದೆ. ಅವನು

ಹುಬ್ಬುಗಂಟಿಕ್ಕಿ ಆಕಾಶವನ್ನು ಪರಿಶೀಲಿಸುತ್ತಲೇ ಹುಟ್ಟುಹಾಕುತ್ತಿದ್ದ. ಥಕ್ಕನೆ ಎಲ್ಲಿಂದಲೊ ಬಂದ ತಂಪಾದ ಬೀಸುಗಾಳಿ ನೀರ ಮೇಲೆ ಉಜ್ಜಿಕೊಂಡು ಹೋಯಿತು. ಸರಪಳಿಯಂತೆ ಒಂದಾದ ಮೇಲೊಂದು ಅಲೆಗಳು ಹೆಣೆದುಕೊಂಡವು. ದೋಣಿ ಅತ್ತಿಂದಿತ್ತ ತೂಗಾಡಿತು. ಮಕ್ಕಳೆಲ್ಲ ಭಯದಿಂದ ಕೂಗಲು ಪ್ರಾರಂಭಿಸಿದರು.

"ಅದೇನಿಲ್ಲ, ಅದೇನೂ ಇಲ್ಲ... ಶಾಂತವಾಗಿ ಇರಿ," ಹುಟ್ಟು ಹಾಕುತ್ತಿದ್ದ ಇತರ ಅಂಬಿಗರು ಕೂಗಿ ಹೇಳಿದರು. ಆದರೆ ದಟ್ಟ ಕಾಡಿನ ಗರ್ಭದ ಬೆನ್ನಿಂದ ನೀಲಿ ಆಗಸದಲ್ಲಿ ತೆವಳಿಕೊಂಡು ಬಂದ ಕಪ್ಪು ಭಯಾನಕ ಮುಗಿಲು ದೋಣಿ ನಡಸುವವರ ಮಾತನ್ನು ಸುಳ್ಳಾಗಿಸಿದವಷ್ಟೆ.

ನದಿಯ ಸ್ವರೂಪ ಬದಲಾಗುತ್ತಿತ್ತು. ಗಾಳಿಯೊಂದಿಗೆದ್ದ ಅಲೆಗಳು ದೋಣಿಯನ್ನು ತೂಗಿ, ಮರದ ಹಲಗೆಗಳಿಗೆ ಬಡಿದುವು! ದೋಣಿಯಲ್ಲಿದ್ದ ಮಕ್ಕಳೆಲ್ಲ ಹಾರಿ, ಅವರವರ ತಾಯಿಯ ತೊಡೆಯೇರಿದರು. ಗಂಡಸರೆಲ್ಲರೂ ಇನ್ನೂ ಬಹುದೂರವಿದ್ದ ನದಿಯ ದಂಡೆಯನ್ನು ಚಿಂತಾಜನಕ ದೃಷ್ಟಿಗಳಿಂದ ದಿಟ್ಟಿಸಿದರು. ನಾವೀಗ ಸರಿಯಾಗಿ ನದಿಯ ನಡುವಿನಲ್ಲಿದ್ದೆವು.

ನಾನು ಫಿಲೊಮಿನಾ ಕಡೆ ತಿರುಗಿದೆ. "ನಾನು ಈಜಲಾರೆ" ಅವಳು ಪಿಸುಗುಟ್ಟಿದಳು. ಅವಳ ಮುಖ ಬಿಳಿಚಿಕೊಂಡಿತ್ತು. ನನಗೆ ಈಜಲು ಬರುತ್ತದೆ. ಆದರೆ, ದೋಣಿಯಲ್ಲಿರುವ ಅನೇಕರಿಗೆ ಈಜು ಬರುವುದಿಲ್ಲ. ಭೀತಿಯ ನಡುಕ ನನ್ನ ಬೆನ್ನಹುರಿಯಲ್ಲಿ ಝುರಿಯಂತೆ ಓಡಾಡಿತು. ತಾನೆ ತಾನಾಗಿ ನಾವೆಲ್ಲರೂ ಗಟ್ಟಿಯಾಗಿ ದೇವರ ಪ್ರಾರ್ಥನೆಯಲ್ಲಿ ತೊಡಗಿದೆವು. "ಓಹ್ ! ದೇವರೆ, ನಮ್ಮ ತಂದೆಯೆ." ನಮ್ಮ ಪ್ರಾರ್ಥನೆ ತಲೆಯ ಮೇಲೆ ಬಹುಬೇಗ ಕಪ್ಪಾಗುತ್ತಲಿದ್ದ ಆಕಾಶವನ್ನು ಸೇರಿ ಹಾಗೆಯೆ ಗಾಳಿಯ ಊಳಿಡುವ ಸದ್ದಿನಲ್ಲಿ ಮುಳುಗಿಹೋಯಿತು.

"ಬೇಗ ಬೇಗ ಹುಟ್ಟುಹಾಕು..." ಎಂದು ದೋಣಿಯ ಹಿಂಬದಿಯಿಂದ ಒಬ್ಬ ಮುದುಕ ಕಿರುಚಿಕೊಂಡ. "ಬಿರುಗಾಳಿ ಏಳುತ್ತಿದೆ. ಅದರ ಮಧ್ಯೆ ಸಿಲುಕಿಹಾಕಿಕೊಳ್ಳುವುದಕ್ಕೆ ಮೊದಲೇ ಆ ದಡ ಸೇರಬೇಕು."

ಯುವಕರು ತಮ್ಮ ತಮ್ಮ ಹುಟ್ಟುಗಳ ಮೇಲೆ ಬಾಗಿ, ಬಿರುಸಾದ ಮುಖ ಮಾಡಿ ಹುಟ್ಟು ಹಾಕತೊಡಗಿದರು. ಅವರು ತಮ್ಮಲ್ಲಿದ್ದ ಎಲ್ಲಾ ಶಕ್ತಿಯನ್ನೂ ಒಟ್ಟುಗೂಡಿಸಿ ಹುಟ್ಟುಹಾಕಲು ಪ್ರಯತ್ನಿಸಿದರು.

ದೋಣಿಯೊಳಕ್ಕೆ ನೀರು ನುಗ್ಗಿತು.

"ದೇವರ ತಾಯಿ ಮೇರಿ, ನಮ್ಮನ್ನು ರಕ್ಷಿಸು."

ಕದಡಿದ ನೀರಿನ ಮೇಲೆ ಒಂದು ಮಿಂಚು ಫಳಾರನೆ ಹೊಳೆಯಿತು.

"ಮೇರಿ, ಏಸುವಿನ ತಾಯಿಯೇ, ಮಾನವರ ತಾಯಿಯೇ !"

"ಹಾಕಿರೊ ಹುಟ್ಟು... ಎಡೆಬಿಡದೆ ಹುಟ್ಟು ಹಾಕಿ." ಅಂಬಿಗ ಗರ್ಜಿಸಿದ. ನಾವು ಒಬ್ಬರಿಗೊಬ್ಬರು ಬಿಡದೆ ಅಂಟಿಕೊಂಡೆವು. ಪ್ರಾರ್ಥನೆಯನ್ನು ಮುಂದುವರಿಸಿದೆವು.

ಉದ್ರೇಕಗೊಂಡದ್ದಿತು ಚಂಡಮಾರುತ. ನದಿಯು ನರಳಿತು. ದೋಣಿ ಚೆಂಡಿನಂತೆ ಅತ್ತ ಇತ್ತ ಎಸೆಯಲ್ಪಟ್ಟು ತೂಗಾಡಿತು. ಪ್ರವಾಹದ ಸುಳಿಯಲ್ಲಿ ನಿಸ್ಸಹಾಯಕನಂತೆ ಸಿಲುಕಿತು. ಇದ್ದಕ್ಕಿದ್ದಂತೆ ಗಾಳಿ, ದೋಣಿಯ ಮುಂಭಾಗವನ್ನು ಬಲವಾಗಿ ಬಡಿಯಿತು. ನಾವೆಲ್ಲ ನಮ್ಮ ನಮ್ಮ ಜಾಗಗಳಿಂದ ಹೊರಗೆ ಒಗೆಯಲ್ಪಟ್ಟೆವು. ಕಿರುಚುತ್ತ ನಾವೆಲ್ಲರೂ ಒಬ್ಬರ ಮೇಲೊಬ್ಬರಂತೆ ಧೊಪ್ಪನೆ ಬಿದ್ದೆವು. ನಮ್ಮ ಕೆಳಗೆ ಸಿಕ್ಕಿದ ಮಕ್ಕಳನ್ನೇ ಒದ್ದೆವು. ಯಾರದೋ ಮೊಣಕೈ ನನ್ನ ಮುಖಕ್ಕೆ ಬಲವಾಗಿ ಬಡಿಯಿತು, ಯಾರದೊ ಮಂಡಿ ನನ್ನ ಪಕ್ಕೆಲುಬಿಗೆ ತೀವ್ರವಾಗಿ ಚುಚ್ಚಿತು.

"ಫೆಲಿಸಿ, ಫೆಲಿಸಿ." ನಾನು ಫಿಲೋಮಿನಗಳಿಗಾಗಿ ಅತ್ತಿತ್ತ ಹುಡುಕಿ, ಮುಂದುವರೆದೆ. ಆದರೆ, ನಮ್ಮ ಕೈಗಳು ಮತ್ತೆ ಒಂದಾಗಲೆ ಇಲ್ಲ. ಮೆಲ್ಲನೆ ಸದ್ದು ಮಾಡುತ್ತ ದೋಣಿ ಪಕ್ಕಕ್ಕೆ ಮಗುಚಿಕೊಂಡು ನಮ್ಮೆಲ್ಲರನ್ನೂ ನದಿಯೊಳಗೆ ಕೆಡವಿತು. ಕೊರೆಯುವ ನದಿಯ ನೀರು ರಭಸದಿಂದ ನನ್ನ ಮುಖದ ಮೇಲೆ ಕವಿಯಿತು, ಮೇಲೆ ತಿರುಗಿಸಿ, ಕೆಳಗೆಳೆಯಿತು. ವೇಗವಾಗಿ ಕೆಳಗಿಳಿಯುತ್ತಿದ್ದ ಆ ಕೆಳಸೆಳೆತವನ್ನು ನಾನು ಮುರಿಯಲೆತ್ನಿಸಿದೆ. ಅಡ್ಡ ಬರುತ್ತಿದ್ದ ಮುಳುಗುತ್ತಿರುವವರ ಕೈಕಾಲುಗಳಿಂದ ತಪ್ಪಿಸಿಕೊಂಡು ನೀರಿನ ಮೇಲೆ ಏರಲು ಹವಣಿಸಿದೆ. ಯಾರದೋ ಒಂದು ಕೈ ನನ್ನನ್ನು ಸ್ಪರ್ಶಿಸಿತು...ಮರುಕ್ಷಣವೆ ದೂರ ಹೋಯಿತು. "ಫಿಲೊ, ಫಿಲೊ..."

ಹಾಗೂ ಹೀಗೂ ತೇಕುತ್ತ, ಮೇಲುಸಿರುರ ಬಿಡುತ್ತ ನೀರ ಮೇಲೆ ಬಂದಾಗ ನನ್ನ ಪಪ್ಪುಸಗಳು ಇನ್ನೇನು ಒಡೆದುಹೋಗುವವೊ ಎನ್ನಿಸಿತು! ಸಾವಿನೊಂದಿಗೆ ಹೋರಾಡುತ್ತಿದ್ದ ಗಂಡಸರು ಹೆಂಗಸರು ಮಕ್ಕಳು, ಎಲ್ಲರ ಚೀರಾಟ ವಾತಾವರಣವನ್ನು ವ್ಯಾಪಿಸಿತ್ತು. ದೋಣಿಯ ಮರದ ಹಲಗೆಗಳನ್ನು ಭದ್ರವಾಗಿ ಹಿಡಿಯುವ ಪ್ರಯತ್ನದಲ್ಲಿ ಅದೆಷ್ಟೋ ಕೈಗಳು ಹಿಡಿದುಕೊಳ್ಳಲಾಗದೆ ನುಣುಚಿ ಜಾರಿ ಹೋದವು. ಇನ್ನು ಕೆಲವು ಕೈಗಳು ಆಸರೆ ಹುಡುಕುವ ಕೈಗಳಿಂದ ದೂಡಲ್ಪಟ್ಟವು. ಕಟ್ಟಕಡೆಗೊಮ್ಮೆ ನದಿಯಿಂದೆದ್ದ ಅಲೆಯೊಂದು ದೋಣಿಯನ್ನೆತ್ತಿ ಮುಳುಗಿಸಿಬಿಟ್ಟಿತು.

ನಾನೇನು ಮಾಡಲು ಸಾಧ್ಯ ಆಗುವಂತಿತ್ತು? ನನಗೆ ಆಗ ಸಹಾಯ ಮಾಡಲಾಗಲಿಲ್ಲವೆ? ಅವರೆಲ್ಲ ಮುಳುಗುವುದನ್ನು ನೋಡುವುದಷ್ಟೇ ನನ್ನ ಕೆಲಸವೇ? ಸುಮಾರು ಮೂವತ್ತು ಅಡಿಗಳಷ್ಟು ದೂರದಾಚೆ ಒಂದು ಮರದ ದಪ್ಪದಿಮ್ಮಿಯನ್ನು ನಾನು ನೋಡಿದೆ. ಗಾಳಿಯ ವಿರುದ್ಧ, ಕಣ್ಣು ಮುಚ್ಚಿಕೊಂಡು, ದಿಮ್ಮಿಯ ಕಡೆ ಈಜಿದೆ.

"ಫೆಲಿಸಿಟಸ್, ಫೆಲಿಸಿಟಸ್." ದಿಮ್ಮಿಯ ಕಡೆಯಿಂದ ಮುಂದೆ ಬಂದ ಯಾರದೋ ಕೈಯನ್ನು ಹಾಗೆಯೇ ಫಕ್ಕನೆ ಭದ್ರವಾಗಿ ಹಿಡಿದುಕೊಂಡೆ. "ಮೇಲೆ ಬಾ, ಮೇಲೆ ಬಾ...!" ಮಾರ್ಕಸ್ ಕಿರುಚಿಕೊಂಡ. "ಹಾಗೇ ರಭಸವಾಗಿ ನೀರು ತಳ್ಳಿ ಮುಂದೆ ಬಾ." ಪ್ರಯಾಸದಿಂದ ಮುಂದುವರೆದು ದಿಮ್ಮಿಯ ಬಳಿ ಇತರರನ್ನು ಸೇರಿ ಕುಸಿದುಬಿದ್ದೆ. ಡೈಮಂಡ್, ಡೇವಿಡ್, ಮಾರ್ಕಸ್, ಮೇರಿ, ಅವರುಗಳೆಲ್ಲ ಬದುಕಿದ್ದರು, ನನ್ನಂತೆ. ಉಳಿದವರಿಗೇನಾಯಿತು? ನನ್ನ ಆತ್ಮೀಯ ಗೆಳತಿ ಫಿಲೋಮಿನ?

"ಫಿಲೋ... ಫಿಲೂಲೂಲೂಲೂಲೂ" ಉನ್ಮತ್ತಳಂತೆ ಗಾಳಿಯಲ್ಲಿ ಚೀರಿದೆ.

ಅವಳನ್ನು ನಾನು ಹುಡುಕಲೇಬೇಕು, ನರವಾಗಬೇಕು, ಉಳಿಸೇಬೇಕು !

"ಬೇಡ ಫೆಲಿಸಿಟಸ್. ಈಗಾಗದು. ಈ ಕ್ಷಣದಲ್ಲಿ ನಾವು ಏನೂ ಮಾಡಲು ಸಾಧ್ಯವಿಲ್ಲ. ಚಂಡಮಾರುತದ ಅಬ್ಬರ ಕಳೆಯುವ ತನಕ ಕಾಯಬೇಕು.

ನಾನು ನಡುಗಿದೆ... ನೀರು ನನ್ನ ಮುಖದ ಮೇಲಿಂದ ಕೆಳಗಿಳಿಯಿತು – ಅಥವಾ ಅವು ಕಂಬನಿಯ ಹನಿಗಳೊ ?

"ಕೇಳಿ" ಮೇರಿ ಕೂಗಿದಳು: "ಯಾರೊ ಕರೆಯುತ್ತಿದ್ದಾರೆ."

ನಾವು ಬಹು ಶ್ರಮದಿಂದ ಕಿವಿಗೊಟ್ಟು ಆಲಿಸಿದೆವು. ಹೌದು, ಒಂದು ಕುಗ್ಗಿದ ಧ್ವನಿ. "ಸಹಾಯ, ಸಹಾಯ."

"ಅದೇನದು ?... ಅಯ್ಯೋ ಜೀಸಸ್, ಅದು ಸ್ಯಾಮ್ಯುಯಲ್ ಡಂಗ್‌ಡಂಗ್‌ನ ಧ್ವನಿ"

"ಅವನು ಮುಳುಗುತ್ತಿದ್ದಾನೆ...." ಮೇರಿ ಕೂಗಿದಳು. "ಅವನಿಗೆ ಮೇಲೆ ಬರಲು ಆಗುತ್ತಿಲ್ಲ... ಅವನಿಗೆ ಈಜಲು ಬರುವುದಿಲ್ಲ. ಓ ದೇವರೆ ! ಅವನು ಮುಳುಗುತ್ತಿದ್ದಾನೆ"

ಮೊರೆವ ಗಾಳಿಯ ಬುಸುಗುಡುವಿಕೆ, ನೀರಿನ ಅಲೆಗಳ ಗರ್ಜನೆಯ ಹೊರತಾಗಿ ಬೇರೇನೂ ಕೇಳಿಸುತ್ತಿರಲಿಲ್ಲ.

ಹೆದರಿಕೆಯಿಂದ ಅಗಲವಾಗಿ ಬಿಟ್ಟುಕೊಂಡಿದ್ದ ಮೇರಿಯ ಕಣ್ಣುಗಳನ್ನು ನಾನು ನೋಡಿದೆ. ಹಾಗೆಯೇ ಡೇವಿಡ್, ಡೈಮಂಡ್, ಮಾರ್ಕಸ್‌ರನ್ನೂ ದಿಟ್ಟಿಸಿದೆ. ಯಾರೊಬ್ಬರೂ ಚಲಿಸಲಿಲ್ಲ.

"ಸಹಾಯ.... ಕಾಪಾಡಿ... !"

ಸ್ಯಾಮ್ಯುಯಲ್ ಡಂಗ್‌ಡಂಗ್ ಮತ್ತೆ ನೆರವಿಗಾಗಿ ಕೂಗಿಕೊಳ್ಳುತ್ತಿದ್ದ ! ನಮ್ಮ ಈ ಸೋದರ ನಮ್ಮ ಕಣ್ಣೆದುರಲ್ಲೆ ಮುಳುಗುತ್ತಲಿದ್ದ !

ಇದ್ದಕ್ಕಿದ್ದಂತೆಯೆ ಒಂದು ವಿಧದ ಅನಿರೀಕ್ಷಿತ ಶಾಂತತೆ ನನ್ನ ಮೇಲೆ ಹಾಯ್ದುಹೋದಂತಾಯಿತು. ನಾನು ಎದ್ದು ಕುಳಿತೆ - ನನ್ನ ಸೀರೆಯನ್ನು ಬಿಚ್ಚಿ ಹಗ್ಗದ ಮಾದರಿ ಸುತ್ತಿ ಒಂದು ತುದಿಯನ್ನು ಒಳಲಂಗಕ್ಕೆ ಸಿಕ್ಕಿ ಹಾಕಿದೆ. ಹುಚ್ಚೆದ್ದು ಕುಣಿಯುತ್ತಿದ್ದ ನದಿಯ ಕರಿನೀರನ್ನು ನೋಡಿ "ಸ್ಯಾಮ್ಯುಯಲ್, ನಾನು ಬರುತ್ತಿದ್ದೇನೆ" ಎಂದು ಕೂಗಿ ನದಿಯೊಳಕ್ಕೆ ನೆಗೆದೆ.

ಗಾಳಿ ವಿರುದ್ಧ ರಭಸವಾಗಿ ಈಜಿ ಮುಂದೆ ಹೋದೆ. ನನ್ನ ಲಂಗ, ಸೀರೆ ನೀರಿನಿಂದ ತೊಯ್ದು ಭಾರದಿಂದ ನನ್ನನ್ನು ಕೆಳಕ್ಕೆ ಎಳೆಯುತ್ತಿತ್ತು. "ಸ್ಯಾಮ್ಯುಯಲ್" ನಾನು ಕೂಗಿಕೊಂಡೆ, "ಇಲ್ಲಿದ್ದೇನೆ, ಇಲ್ಲಿ."

ಏನೊ ನೀರಿನಿಂದ ಚೆಂಡಿನಂತೆ ಬುಡಕ್ಕನೆ ಮೇಲೆದ್ದಿತು. ಒಂದು ಕೈ, ಆಮೇಲೆ ಒಂದು ತಲೆ. ಸ್ಯಾಮ್ಯುಯಲ್ಲನ ತಲೆಯೆ ಅದು ! ಅವನು ನನಗೆ ಎಷ್ಟು ಸನಿಹದಲ್ಲಿದ್ದನೆಂದರೆ, ನಾನು ಅವನ ಕಣ್ಣುಗಳನ್ನು ನೋಡುವಷ್ಟು ಸಮೀಪದಲ್ಲಿ ! "ಸಹಾಯ ಮಾಡಿ" ಆತ ಅಸ್ಪಷ್ಟವಾಗಿ ಗಾಬರಿಯಿಂದ ಕಿರಚಿದ. "ಸಹಾಯ !"

"... ನನ್ನ ಸೀರೆ ತುದಿಯನ್ನು ಹಿಡಿದುಕೊ," ನಾನು ಕೂಗಿ ಹೇಳಿದೆ. "ನಾನು ನಿನ್ನನ್ನು ನದಿಯಿಂದ ಹೊರಗೆಳೆದು ಹಾಕುವೆ... ಇಲ್ಲಿ... ಹಿಡಿದುಕೊ." ನನ್ನ ಸೀರೆಯನ್ನು ನನ್ನ ಸೊಂಟದಿಂದ ಬಿಡಿಸಿ ಒಂದು ತುದಿಯನ್ನು ನನ್ನ ಹಲ್ಲಿನಲ್ಲಿ ಭದ್ರವಾಗಿ ಕಚ್ಚಿಕೊಂಡು, ಸೀರೆಯ ಗಂಟಿನ ತುದಿಯನ್ನು ಅವನೆಡೆಗೆ ಬೀಸಿ ಒಗೆದೆ. ಆದರೆ, ಎದ್ದ ಗಾಳಿ, ಅವನು ಅದನ್ನು ಹಿಡಿಯಲಾಗದಂತೆ ಎಲ್ಲೊ ದೂರದೂರಕ್ಕೊಗೆಯಿತು !

"ಹಿಡಿ, ಡಂಗ್‌ಡಂಗ್." ನೀರನ್ನು ಕಾಲಿನಿಂದ ಮೆಟ್ಟಿ ತುಳಿದೆ. ನನ್ನ ಹೃದಯವೆ ಬಾಯಿಗೆ ಬಂದಂತಾಗಿತ್ತು. ಸೀರೆಯನ್ನು ಹಿಡಿದುಕೊಳ್ಳಲು ಸ್ಯಾಮ್ಯುಯಲ್ ಹೆಣಗುತ್ತಿದ್ದನ್ನು ನೋಡುತ್ತಿದೆ.

"ಹಿಡಿದುಕೊ ಅದನ್ನು... ಅದನ್ನು ಹಿಡಿದುಕೊ" ನನ್ನ ಹಿಂದಿನಿಂದ ಅನೇಕ ಕೂಗುಗಳು.

"ಅಯ್ಯೋ ದೇವರೇ ! ಅವನಿಗೆ ಆಗುತ್ತಿಲ್ಲ. ಅವನು ಮುಳುಗುತ್ತಿದ್ದಾನೆ !"



ಎಲ್ಲೊ ಕತ್ತಲೆಯಲ್ಲಿ ಮಾರ್ಕಸ್‌ನ ಕೂಗು ನನಗೆ ಕೇಳಿಸಿತು. "ಫೆಲಿಸಿಟಸ್, ಫೆಲಿಸಿಟಸ್, ಬಂದುಬಿಡು, ಬಂದುಬಿಡು." ನಾನು ಬರಬಹುದಿತ್ತು, ನಾನು ಬರಬೇಕೆಂದೂ ಇದ್ದೆ... ಆದರೆ ಸ್ಯಾಮ್ಯುಯಲ್ಲನನ್ನು ಬಿಟ್ಟು ಬರುವಂತಿಲ್ಲ.

ಇದ್ದಕ್ಕಿದ್ದಂತೆಯೆ ಸೀರೆಯನ್ನು ಬಿಗಿಯಾಗಿ ಎಳೆದ ಹಾಗಾಯಿತು. ನನ್ನ ಹಲ್ಲಿನ ಹಿಡಿತದಿಂದ ಹರಿದು ಹೋಗುವ ಹಾಗಿತ್ತು. ನಾನು ಬಟ್ಟೆಯನ್ನು ಹಲ್ಲಿನಲ್ಲಿ ಬಿಗಿಯಾಗಿ ಕಚ್ಚಿ ಹಿಡಿದೆ. ದಿಕ್ಕು ಬದಲಾಯಿಸಿ ಮತ್ತೆ ಮರದ ಕಾಂಡದತ್ತ ಪ್ರಯಾಸದಿಂದ ಈಜಲು ಪ್ರಾರಂಭಿಸಿದೆ. ನೀರನ್ನು ನನ್ನ ಕಾಲುಗಳಿಂದೊದೆಯುತ್ತ, ತೋಳುಗಳಿಂದ ನೀರನ್ನು ಬಡಿದು, ತುಟಿಗಳನ್ನು ಭದ್ರವಾಗಿ ಅದುಮಿ ಹಿಡಿದು ಮುಂದೆ ಸಾಗಿದೆ. ಇನ್ನು ಸಾಧ್ಯವಿಲ್ಲ ಎನ್ನಿಸಿದಾಗ ಈ ಪ್ರಪಂಚವನ್ನು ಕಡೆಯ ಬಾರಿ ನೋಡಲು ನನ್ನ ಕಣ್ಣುಗಳನ್ನು ತೆರೆದೆ. ಹೆದರಿ ಕಂಗಾಲಾದ ನಾಲ್ಕು ಜೋಡಿ ಕಣ್ಣುಗಳು ನನ್ನ ಮುಂದೆ ಇದ್ದವು.

"ಫೆಲಿಸಿಟಸ್, ಬಾ, ಬಂದುಬಿಡು..." ನನಗದೆಷ್ಟು ಶಕ್ತಿಯಿತ್ತೊ ಅಷ್ಟನ್ನೂ ಒಟ್ಟುಗೂಡಿಸಿ, ನೀರನ್ನು ಸೀಳಿ ಮುನ್ನುಗ್ಗಿದೆ, ಮಾರ್ಕಸ್‌ನ ಕೈಗಳನ್ನು ಬಲವಾಗಿ ಹಿಡಿದುಕೊಂಡೆ. ನಾನು ಸುರಕ್ಷಿತವಾಗಿ ಮರದ ಬಳಿ ತಲುಪಿದ್ದೆ. ನಾವೆಲ್ಲ ಸೇರಿ ಸ್ಯಾಮ್ಯುಯಲ್‌ನನ್ನು ಮೇಲಕ್ಕೆಳೆದು ಹಾಕಿದೆವು. ಅವನು ತಾನೇ ತಾನಾಗಿ ಅನೇಕ ಸಲ ಹೊಟ್ಟೆಯೊಳಗೆ ಸೇರಿದ್ದ ನೀರನ್ನು ಹೊರಚೆಲ್ಲಿದ.

ಗಡಗಡನೆ ನಡುಗುತ್ತ, ಬಳಲಿಕೆಯಿಂದ ಇನ್ನೇನು ಅಳುವಂತಿದ್ದ ನಾವು ಒಬ್ಬರಿಗೊಬ್ಬರು ಅಂಟಿಕೊಂಡೆವು... ಎಲ್ಲರೂ ಒಟ್ಟಿಗೆ ಬೇಡಿದೆವು, "ಓ ಜೀಸಸ್ ! ನನ್ನ ದೇವರೆ."

"ರಕ್ಷಿಸಿ !" ಇದೊಂದೆ ಮಾತು ಗಾಳಿ ನಮಗೊಯ್ದು ತಲುಪಿಸಿದ್ದು.

ನಿಧಾನವಾಗಿ ಸ್ಯಾಮ್ಯುಯಲ್ ತನ್ನ ತಲೆಯೆತ್ತಿ ನನ್ನ ಕಡೆ ತಿರುಗಿ ನೋಡಿದ: "ಕಿಂಡೊ !" ಅವನು ಪಿಸುಗುಟ್ಟಿದ: "ಅವನು ಮುಳುಗಿ ಹೋಗುತ್ತಿದ್ದಾನೆ."

ಮೌನ ಆವರಿಸಿತು. ನಾವ್ಯಾರೂ ಮಾತಾಡಲಿಲ್ಲ. ಗಾಳಿ ಕೂಡ ತನ್ನ ಉಸಿರನ್ನು ಬಿಗಿಹಿಡಿದ ಹಾಗಿತ್ತು.

ನನ್ನ ಮೈ ನಡುಗಿತು. ನಿಧಾನವಾಗಿ, ನನಗೇ ಅರಿವಿಲ್ಲದೆ, ಎದ್ದು ನಿಂತು ಕೆರಳಿದ ನೀರಿಗೆ ಮತ್ತೆ ಧುಮುಕಿದೆ !

* * * *

ಅಂದು – 1965ರ ಫೆಬ್ರುವರಿಯ ಆ ದುರದೃಷ್ಟಕರ ದಿನ – ನಮ್ಮ ಸುಮಾರು ಐವತ್ತು ಜನಸತ್ತರು. ಲಿಯೊ ಹಾಗೂ ಅವನ ಇಡೀ ಕುಟುಂಬ, ಮಾರ್ಗರೆಟ್ ಮತ್ತು ಅವಳ ಮಗು ಹಾಗೂ ನನ್ನ ಆಪ್ತ ಗೆಳತಿ ಫಿಲೊ... ಫಿಲೊಮಿನ.

ಚಂಡಮಾರುತ ಶಾಂತವಾದ ನಂತರ ನಾವುಗಳೆಲ್ಲ ಮರದಿಂದಿಳಿದು ನದಿಯ ದಡಕ್ಕೆ ಈಜಿದೆವು. ಬದುಕಿ ಉಳಿದ ನಾವೆಲ್ಲಾ ದಡದ ಬಳಿ ಸೇರಿದೆವು. ಇನ್ನೂ ಯಾರಾದರೂ ದಡ ಸೇರಿಯಾರೊ ಎಂದು ನಿರೀಕ್ಷಿಸಿದೆವು, ಕಾದೆವು. ಆದರೆ ಏನೂ ಪ್ರಯೋಜನ ಆಗಲಿಲ್ಲ.

# ದರೋಡೆಕಾರರ ಧಾವಳಿ

1980 ರ ಫೆಬ್ರುವರಿ 14ರ ಆ ರಾತ್ರಿ ತಣ್ಣಗಿತ್ತು, ಕತ್ತಲು ಕವಿದಿತ್ತು. ದಟ್ಟ ಕಪ್ಪು ಮೋಡಗಳ ಹಿಂದಿನಿಂದ ಹೊರಬರಲೆತ್ನಿಸಿದ ಚಂದ್ರ, ಬರಲಾಗದೆ ಸೋತು ಬಿಟ್ಟಿದ್ದ. ಸುತ್ತಣ ಬೆಟ್ಟಗಳಿಂದ ಬೀಸುತ್ತಿದ್ದ ಶೀತಮಾರುತ ಹಿಮದ ಕಂಪನ್ನು ತರುತ್ತಿತ್ತು. ಉತ್ತರಪ್ರದೇಶದ ಹರಿಜನರ ಸಣ್ಣ ಗ್ರಾಮ ರಾಮ್‌ನಗರದ ಚಿಕ್ಕ ಬೀದಿಗಳ ಮೂಲಕ ತಂಗಾಳಿ ಬೀಸಿ ಬರುತ್ತಿತ್ತು. ಗಾಳಿಯ ಬೀಸುವಿಕೆ ಎಷ್ಟು ಬಿರುಸಾಗಿತ್ತೆಂದರೆ, ಭಾರದ ಮರದ ಹಲಗೆಗಳಿಂದ ಮಾಡಿದ ಬಾಗಿಲುಗಳನ್ನೂ ಅಲುಗಿಸಿ, ಕಟಕಟನೆ ಸದ್ದು ಮಾಡಿಸಿ, ಅವುಗಳಿಗೆ ಜೋಡಿಸಿದ್ದ ಕಬ್ಬಿಣದ ಗಟ್ಟಿಯಾದ ಬಳೆ ಹಿಡಿಗಳನ್ನೂ ತೂಗಾಡಿಸುತ್ತಿತ್ತು. ಬಾಗಿಲನ್ನು ತೆರೆದು ಒಳಗೆ ಬರಲು ಅನುಮತಿ ಕೇಳುವಂತಿತ್ತು ಈ ಶಬ್ದ. ಗ್ರಾಮದಲ್ಲಿದ್ದ ಕಲ್ಲು-ಮಣ್ಣು ಗುಡಿಸಲುಗಳ ಗೋಡೆಗಳಲ್ಲಿರಿಸಿದ್ದ ಸಣ್ಣ ಕಿಟಕಿಗಳ ಮೂಲಕ ಶೀತಗಾಳಿ ಒಳಹೊಕ್ಕುತ್ತಿತ್ತು.

ಸತೀಶ್‌ಕುಮಾರ್ ಫೂಲ್‌ಸಿಂಗ್ ಗಾಳಿಯು ಸಿಳ್ಳೆ ಹೊಡೆಯುವ ಶಬ್ದವನ್ನು ಆಲಿಸಿದಾಗ ಅವನ ಮೈ ಗಡಗಡನೆ ನಡುಗಿತು. ಅಡುಗೆ ಮನೆ ಪಕ್ಕಕ್ಕೆ ಇರುವ ಕೊಠಡಿಯ ಮೂಲೆಯಲ್ಲಿ ಒಂದು ತೆಳುವಾದ ಹತ್ತಿಯ ರಜಾಯಿ ಹೊದ್ದುಕೊಂಡು ಅವನು ಮಲಗಿದ್ದ. ಒಂದು ಮಂಚದ ಮೇಲೆ ಮಲಗಿದ್ದ ಅವನ ತಂದೆ ಕೆಮ್ಮಿ ಮಗ್ಗುಲಿಗೆ ಹೊರಳಿಕೊಂಡ. ಇನ್ನೊಂದರಲ್ಲಿ ಅವನ ಪುಟ್ಟ ತಂಗಿ ಸೀತಾ, ತಾಯಿಯ ಬೆಚ್ಚಗಿನ ಮಡಿಲಿಗೆ ಹತ್ತಿರ ಸರಿದು ಮಲಗಿದ್ದಳು. ನಿದ್ದೆಯಲ್ಲಿ ಮಾತಾಡುತ್ತಿದ್ದ ಸೀತಳನ್ನು ಅವಳ ತಾಯಿ ಮಲಗಿಕೊಳ್ಳಲು ಹೇಳಿ ಹರಿದ ಕಂಬಳಿಯನ್ನು ಅವಳಿಗೆ ಹೊದ್ದಿಸಿದಳು.

ಅವನ ಪಕ್ಕದಲ್ಲಿ ಮಲಗಿದ್ದ ಅಣ್ಣ ಹಾಗೆಯೆ ಹೊರಳಿದ. ''ಈ ಹಾಳು ಚಳಿ'' ಎಂದು ಗೊಣಗಿದ. ''ಬೇರೇನೂ ಇಲ್ಲವೆ ಹೊದಿಯಲಿಕ್ಕೆ ?''

ಬೇರೇನೂ ಇಲ್ಲ ಎಂಬುದು ಸತೀಶನಿಗೆ ಗೊತ್ತಿತ್ತು. ಕೂಲಿ ಕೆಲಸ ಮಾಡುತ್ತಿದ್ದ ಅವನ ತಂದೆ, ರಿಕ್ಷಾ ಎಳೆಯುತ್ತಿದ್ದ ದೊಡ್ಡ ಅಣ್ಣ ವಿನೋದ್ ಇಬ್ಬರೂ ಸೇರಿ ಸಂಪಾದಿಸುತ್ತಿದ್ದ ಅಲ್ಪಗಳಿಕೆ ಸಂಸಾರದ ಎಂಟು ಜನರಿಗೆ ಸಾಲದಾಗಿತ್ತು. ದೂರದ ನೆಂಟರಾದ ಮಂಚಂದ ಅವರ ದನಗಳನ್ನು ನೋಡಿಕೊಂಡು ಸತೀಶನೂ ಸ್ವಲ್ಪ ಹಣ ಸಂಪಾದಿಸುತ್ತಿದ್ದ. ಮಂಚಂದ ಕುಟುಂಬದವರೇನೂ

ಶ್ರೀಮಂತರಲ್ಲ. ಆದರೆ, ಅವನು, ಅವನ ಹೆಂಡತಿ ವಯಸ್ಸಾದವರು. ಗಂಡು ಮಕ್ಕಳು ಬಹಳ ಹಿಂದೆಯೆ ಹಳ್ಳಿ ಬಿಟ್ಟು ಸಂಪಾದನೆಗೆಂದು ಪಾಟ್ನಾ ನಗರಕ್ಕೆ ಹೋಗಿದ್ದರು. ಹಾಗೆ ಹೊರಟಂದಿನಿಂದಲೂ ಅವರಿಂದ ಏನೂ ಸಮಾಚಾರವೇ ಬಂದಿರಲಿಲ್ಲ. ಸತೀಶ್‌ಕುಮಾರ್ ಮತ್ತೆ ನಡುಗಿದ. ನಡುಕ ಚಳಿಯಿಂದ ಬಂದುದಲ್ಲ. ಅಸ್ಪಷ್ಟವಾದ ಭವಿಷ್ಯದ ನಡುಕ, ಬಡವನಾಗಿದ್ದರೆ ಬದುಕು ಕಷ್ಟ.

ಆಗ ಏನೋ ಶಬ್ದ ಕೇಳಿಸಿತು. ಬೀಸುವ ಗಾಳಿಯದಲ್ಲ. ಅವರ ಮನೆ ತಾರಸಿಯ ಮೇಲೆ ಬರಿಗಾಲಿನಲ್ಲಿ ನಡೆಯುತ್ತಿದ್ದ ಸದ್ದು! ಅನಂತರ ಒಂದು ಪಿಸುದನಿಯ ಅಣತಿ ಮಾತು: "ಏಯ್, ನಡೆಯೊ... ಎಡಗಡೆಗೆ ತಿರುಗಿ ನಡೆ... ಪಕ್ಕದ ಮನೆಯತ್ತ ನಡೆ."

ಸತೀಶ ಅತ್ತಿತ್ತ ಮಿಸುಕಾಡದೆ ಮಲಗಿದ್ದ.

"ಸತೀಶ್?" ಕತ್ತಲಲ್ಲಿ ಅವನ ತಂದೆ ವಿಚಾರಿಸಿದ "ನೀನೇನು ಮಾತಾಡಿದ್ದು?"

"ನಾನಲ್ಲ ಅಪ್ಪಾಜಿ. ಹೊರಗೆ ಯಾರೊ ಇರಬೇಕು ಅಂತ ನನಗನ್ನಿಸುತ್ತಿದೆ."

"ಯಾರು? ಎಲ್ಲಿ?" ಅವನ ತಾಯಿ ಧಿಗ್ಗನೆದ್ದು ಕುಳಿತಳು. "ನಮ್ಮ ದನದ ಕರುವನ್ನು ಕದಿಯಲು ಅವರು ಬಂದಿದ್ದಾರೆ."

"ಯಾವುದೊ ಬೀದಿ ನಾಯಿ ಇರಬೇಕು..." ಸತೀಶನ ಅಪ್ಪ ಗೊಣಗಿದ. ಆದರೆ ಅವನಿಗೆ ನಂಬಿಕೆ ಇರಲಿಲ್ಲ. "ಹ್ಞೂಂ! ನಾನು ಅದನ್ನು ಕಟ್ಟಿ, ಬಾಗಿಲು ಭದ್ರಪಡಿಸಿ ಬರುತ್ತೇನೆ."

ಕತ್ತಲಲ್ಲಿಯೆ ಅವನ ಅಪ್ಪ ಚಪ್ಪಲಿಗಳನ್ನು ಹುಡುಕಿ ಕಾಲಿಗೆ ಹಾಕಿಕೊಂಡದ್ದು ಸತೀಶನಿಗೆ ಕೇಳಿಸಿತು. ಇದ್ದಕ್ಕಿದ್ದಂತೆಯೇ ಎತ್ತರದ ದನಿಯ ಚೀತ್ಕಾರ ರಾತ್ರಿಯ ಮೌನವನ್ನು ಭೇದಿಸಿತು! ಅದರ ಹಿಂದೆಯೇ ಯಾವುದೊ ಮರದ ಮೇಲೆ ಹೊಡೆದ ಶಬ್ದ.

"ಬಾಗಿಲು ತೆಗೆಯಿರಿ." ಒಂದು ಒಡಕಲು ಗೊಗ್ಗರು ಗಂಟಲಿನ ಸ್ವರ ಕೇಳಿ ಬಂತು. "ಬಾಗಿಲು ತೆಗೆಯಿರಿ, ಇಲ್ಲವೆ ಗುಂಡು ಹಾರಿಸುತ್ತೇವೆ."

ಚಿಕ್ಕ ಕೊಠಡಿಯಲ್ಲಿ ಯಾರೂ ಅತ್ತಿತ್ತ ಚಲಿಸಲಿಲ್ಲ. ಸತೀಶನ ತಾಯಿ ಕಿರುದನಿಯಲ್ಲಿ ಹೇಳಿದಳು: "ದರೋಡೆಕೋರರು, ಅಯ್ಯೋ ದೇವರೇ." ಕ್ಷಣಮಾತ್ರದಲ್ಲಿ ಅವನ ಅಪ್ಪ ಬಾಗಿಲ ಬಳಿ ಹೋಗಿ ಮೆಲ್ಲನೆ ಬಾಗಿಲನ್ನು ಎಳೆದು, ತೆರೆದ. "ನಾವೂ ಬರುತ್ತಿದ್ದೇವೆ!" ಎಂದು ಮೆಲುದನಿಯಲ್ಲಿ ನುಡಿದ ಸತೀಶ. ಅಪ್ಪನನ್ನು ಹಿಂದೆಹಾಕಿ ಮನೆಯ ಅಂಗಳದತ್ತ ಮೆಲ್ಲನೆ ಜಾರಿಕೊಂಡು ನಡೆದ.

ರಾತ್ರಿಯ ಕತ್ತಲ ನೀರವತೆಯನ್ನು ಒಡೆದು ಗುಂಡಿನ ಶಬ್ದ ಕೇಳಿಸಿತು. ಹಿಂದೆಯೆ ಭಯದಿಂದ ಚೀರಿದ ಹೆಂಗಸಿನ ವಿಹ್ವಲ ದನಿ: "ಕಾಪಾಡಿ, ಕಾಪಾಡಿ, ದರೋಡೆಕೋರರು."

ಸತೀಶನ ಹೆಗಲಮೇಲೆ ಅವನ ತಂದೆಯ ದೊಡ್ಡ ಕೈ ಭಾರವಾಗಿ ಬಿತ್ತು. "ತಾಳು ತಾಳು!" ಎಂದು ಎಚ್ಚರಿಸಿದ. ಸತೀಶ, ನಿಂತು ಹಾಗೇ ರಾತ್ರಿಯ ಕತ್ತಲಲ್ಲಿ ಸುತ್ತಲೂ ನೋಡಿದ. ಆ ಥಟ್ಟನೆ ಎಲ್ಲಿಂದಲೋ ಒಂದು ಕರಿಯುನೆರಳು ಮುಂಚಂದ ಅವರ ಮನೆಯ ಮೇಲೆ ನೆಗೆಯಿತು! ನೆಗೆದು.

ಆ ಕತ್ತಲ ಕಪ್ಪಿನಲ್ಲಿ ಕರಗಿ ಹೋಯಿತು. "ಅವರು ಮಂಚಂದ ಅವರ ಮನೆ ಮೇಲಿದ್ದಾರೆ" ಎಂದು ಪಿಸುಗುಟ್ಟಿದ ಸತೀಶ "ನಾವು ಅವರಿಗೆ ನೆರವಾಗಬೇಕು" ಎಂದ.

"ಷ್ಷ್, ನಾವು ಇತರರನ್ನು ಕರಿಯಬೇಕು."

"ನಾನು ಹೋಗುತ್ತೇನೆ." ಎಂದ ಸತೀಶ.

ಅಂಗಳದಾಚೆ ಬೀದಿ ಕಡೆ ನಡೆಯಲು ತಿರುಗಿದ. ಅವನಿನ್ನೂ ಅಂಗಳ ದಾಟಿರಲಿಲ್ಲ. ಅಷ್ಟರಲ್ಲೇ ಮೂರು ಗುಂಡುಗಳ ಸದ್ದು ಕೇಳಿಬಂದವು. ಅದರ ಹಿಂದೆಯೇ "ಬಾಗಿಲು ತೆಗೆಯಿರಿ ಹೇಡಿಗಳಾ, ಇಲ್ಲವೊ ನಾವು ಒಡೆದು ಒಳಗೆ ನುಗ್ಗುತ್ತೇವೆ" ಎಂಬ ಆರ್ಭಟ ಕೇಳಿಸಿತು.

ಮಂಚಂದರ ಪತ್ನಿಯವರ ಕೂಗು ಸತೀಶನ ಬೆನ್ನು ನಡುಗುವಂತೆ ಮಾಡಿತು. ಅವನು ಸರಸರನೆ ಮುಂದುವರಿದ. "ಅವರು ಒಡೆದು ಮನೆಯೊಳಗೆ ನುಗ್ಗಿದ್ದಾರೆ" ಎಂದು ಯೋಚಿಸಿದ ಅವನು "ಕೂಡಲೆ ಹಳ್ಳಿಯವರನ್ನು ನೆರವಿಗಾಗಿ ಕರೆತರಬೇಕು" ಎಂದುಕೊಂಡ. ಗೋಡೆಗೆ ಆತುಕೊಂಡು ನೆರಳಿನಂತೆಯೆ ಸದ್ದು ಮಾಡದೆ ಬೀದಿಯುದ್ದಕ್ಕೂ ಓಡಿದ ಸತೀಶ.

ಎಲ್ಲರ ಮನೆಯ ಬಾಗಿಲುಗಳನ್ನೂ ದಡದಡನೆ ಬಡಿದು ಅವನು ಕೂಗು ಹಾಕಿದ: "ಮಾವ ಬಾಗಿಲು ತೆರೆಯಿರಿ, ಸಹಾಯಕ್ಕೆ ಬನ್ನಿ, ಡಕಾಯಿತರು ಮಂಚಂದ ಅವರ ಮನೆ ಬಾಗಿಲನ್ನು ಒಡೆದು ಒಳಗೆ ನುಗ್ಗಿದಾರೆ. ಬನ್ನಿ ಸಹಾಯಕ್ಕೆ."

ಎಲ್ಲರೂ ಅವರವರ ಮನೆ ಬಾಗಿಲು ತೆರೆದರು. ನಿದ್ದೆಗಣ್ಣಿನ ಮುಖಗಳು ಕಿಟಕಿಗಳಿಂದ ನೋಡತೊಡಗಿದವು. "ಏನದು ಸತೀಶ, ಏನಾಗುತ್ತಿದೆ? ನಾವು ಕೇಳಿದುದು ಗುಂಡುಗಳ ಸದ್ದಲ್ಲವೇನು?"

"ಡಕಾಯಿತರು ಬಂದಿದ್ದಾರೆ! ಡಕಾಯಿತರು!" ಸತೀಶ ಇನ್ನೊಮ್ಮೆ ಕೂಗಿದ. "ಮಂಚಂದ ಅವರ ಮನೆಯಲ್ಲಿ. ಬೇಗ ಬೇಗ ಬಂದೂಕುಗಳನ್ನು ತೆಗೆದುಕೊಳ್ಳಿರಿ. ಇಡೀ ಹಳ್ಳಿಯನ್ನೇ ಅವರು ಕೊಳ್ಳೆಹೊಡೆಯುವುದಕ್ಕೆ ಮುಂಚೆಯೆ ಎಲ್ಲರೂ ಬೇಗ ಬನ್ನಿ."

"ಬಂದೂಕುಗಳು?" ಮುದುಕನೊಬ್ಬ ಆಚ್ಚರಿಯಿಂದ ಕೇಳಿದ. ಇಡೀ ಗ್ರಾಮದಲ್ಲಿ ಯಾರ ಬಳಿಯೂ ಬಂದೂಕ, ತುಪಾಕಿಗಳಿಲ್ಲ. ನಾವೆಲ್ಲ ಬಡವರು. ಹೋರಾಡಲು ನಮ್ಮ ಮುಷ್ಟಿಯಲ್ಲದೆ ಬೇರೇನೂ ಇಲ್ಲ. ಕಳೆದುಕೊಳ್ಳಲು ನಮ್ಮ ಜೀವ ಬಿಟ್ಟು ಬೇರೇನಿಲ್ಲ."

"ಆದರೂ ನಾವು ಹೋರಾಡುತ್ತೇವೆ" ಮತ್ತೊಬ್ಬ ಕೂಗಿದ. "ಕೋಲು, ಕಲ್ಲು, ಕಬ್ಬಿಣದ ಸರಳುಗಳನ್ನು ತನ್ನಿ, ಬೇಗ ತನ್ನಿ."

ಸತೀಶ ಓಡಿದ. ಎಲ್ಲರ ಮನೆ ಬಾಗಿಲನ್ನೂ ಬಡಿದು ಎಬ್ಬಿಸಿ, ಕೂಗಿದ: "ಡಕಾಯಿತರು, ಡಕಾಯಿತರು."

ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿತು. ಗ್ರಾಮದ ಎಲ್ಲಾ ಕಡೆಗಳಿಂದ ಬಂದ ಜನರು ಮಂಚಂದರ ಮನೆ ಸುತ್ತ ಗುಂಪುಗೂಡಿದರು. ಬಿಗಿದ ಮೋರೆಗಳು, ಕೈಗಳಲ್ಲಿ ಹಾರೆ, ಪಿಕಾಸಿ, ಲಾಠಿಗಳು. ದೂರದಿಂದಲೇ

ಡಕಾಯಿತರ ಆರ್ಭಟ, ಅವರಿಗೆ ಕೇಳುತ್ತಿತ್ತು: "ಹೋಗಿ ಇಲ್ಲಿಂದ. ಇಲ್ಲದೆ ಹೋದರೆ ನಾಯಿಗಳನ್ನು ಬಡಿದಂತೆ ಬಂದೂಕಿನಿಂದ ಸುಟ್ಟುಬಿಡುತ್ತೇವೆ."

"ಅವರು ನಮ್ಮನ್ನು ಇನ್ನೇನು ಕೊಂದೇಬಿಡುತ್ತಾರೆ."

"ನಿಮ್ಮೆಲ್ಲರನ್ನೂ, ಪ್ರತಿಯೊಬ್ಬರನ್ನೂ, !" ಎಂಬ ಗರ್ಜನೆಯ ಉತ್ತರ. ಕತ್ತಲೆಯಲ್ಲಿ ಎರಡು ಗುಂಡುಗಳು ಹಾರಿದವು.

"ನಾವು ಮನೆಯನ್ನು ಸುತ್ತುವರಿಯಬೇಕು." ಸತೀಶನ ತಂದೆ ಪಿಸುಗುಟ್ಟಿದ: "ಹೇಗಾದರೂ ಮಾಡಿ ಗೋಡೆ ದಾಟಿ ಒಳಗೆ ನುಗ್ಗಿ."

"ಹೇಗೆ ಸಾಧ್ಯ ?" ಕೇಳಿದ ಒಬ್ಬ ಇಳಿಬಿದ್ದ ಮೀಸೆಯ ಕುಳ್ಳ. ಅವನು ತನ್ನ ಪೈಜಾಮ ಜುಬ್ಬಗಳಲ್ಲೆ ಹೆದರಿಕೆಯಿಂದ ನಡುಗುತ್ತಿದ್ದ. "ನಮ್ಮ ಮೂಗಿನ ತುದಿ ಕಂಡರೆ ಸಾಕು ಅವರು ನಮ್ಮನ್ನು ಕೊಲ್ಲುತ್ತಾರೆ."

"ರಾತ್ರಿಯ ಕವಿದ ಕತ್ತಲು ನಮಗೆ ಅನುಕೂಲಕರ ಆಗಿದೆ. ಅವರು ನಮ್ಮನ್ನು ನೋಡಲಾರರು" ಮೆಲುದನಿಯಲ್ಲಿ ನುಡಿದ ವಿನೋದ್‌ಕುಮಾರ್ ಫೂಲ್ ಸಿಂಗ್. "ನಾವೆಲ್ಲ ಹೋಗುವ, ಬನ್ನಿ," ಎಂದು ಹೇಳಿದ.

"ನಾವೂ ಸಹ ಅವರನ್ನು ನೋಡಲು ಸಾಧ್ಯವಿಲ್ಲ" ಎಂದ ಒಬ್ಬ ಸಣಕಲು ಮನುಷ್ಯ.

ಇವರೆಲ್ಲರ ಮಾತುಕತೆ, ಸಮಾಲೋಚನೆಗಳ ನಡುವೆ ಸತೀಶ ಯಾರಿಗೂ ಸುಳಿವು ಕೊಡದಂತೆ ಮೆಲ್ಲನೆ ನುಸುಳಿಕೊಂಡ. ಪ್ರತಿ ಸಂದುಗೊಂದುಗಳ ಪರಿಚಯವಿದ್ದ ಅವನು ಅವರ ಮನೆಯಂಗಳದ ಮಗ್ಗುಲಿಂದಲೆ ಮೆಲ್ಲನೆ ಗೋಡೆಯನ್ನೇರಿದ. ತಣ್ಣಗೆ ಕೊರೆಯುತ್ತಿದ್ದ ಕಲ್ಲುಗಳನ್ನು ಹಿಡಿದುಕೊಂಡು ಮೇಲೇರಿದ. ಅಲ್ಲಿಂದ ಪಕ್ಕದ ಕಾಂಪೌಂಡಿನೊಳಗೆ ದೃಷ್ಟಿ ಹರಿಸಿದ. ಎರಡು ನೆರಳುಗಳು ಮಂಚಂದ ಅವರ ಮನೆಯ ತಾರಸಿ ಮೇಲಿಂದ ಗೆರೆಗಳಂತೆ ಸಾಗಿದುವು. ಹಾಗೆಯೆ ಕತ್ತಲಲ್ಲಿ ಒಂದಾಗಿಬಿಟ್ಟವು. ಬಲಮೂಲೆಯಲ್ಲಿದ್ದ ಹುಣಸೆಮರದ ಹಿಂಭಾಗದಿಂದ ಒಂದು ಹುಡುಕು ದೀಪ (ಸರ್ಚ್ ಲೈಟ್) ದ ಪ್ರಕಾಶಮಾನ ಬೆಳಕು ಅಲ್ಲಿ ಇಲ್ಲಿ ಗೋಡೆ ಮೇಲೆಲ್ಲ ಹರಿದಾಡಿತು. ಪಕ್ಕನೆ ಬಂದ ಬೆಳಕಿನ ಕಿರಣ ಸತೀಶನನ್ನು ಕ್ಷಣಕಾಲ ಕುರುಡಾಗಿಸಿಬಿಟ್ಟಿತು. ಬೆಳಕು ಹಾಗೆಯೆ ನೆಲದ ಮೇಲೆ ಅಲ್ಲಿ ಇಲ್ಲಿ ಓಡಾಡಿ, ನುಲಿನುಲಿದು ಬಾಗಿಲುಗಳ ಮೇಲೆ ಬಿತ್ತು. ಮರದ ಹಿಂದಿನಿಂದ ಒಂದು ಧ್ವನಿಗರ್ಜಿಸಿತು: "ಯಾರಾದರೂ ಅಪ್ಪಿತಪ್ಪಿ ಮುಂದೆ ಚಲಿಸಿದಿರೊ ಅಲ್ಲೇ ಸಾಯುತ್ತೀರಿ."

ಬೆಳಕಿನ ಬಿಂಬ ಅತ್ತ ಇತ್ತ ತೂಗಾಡಿ, ಇನ್ನೇನು ಸತೀಶನ ಮುಖದ ಮೇಲೆಯೂ ಬೀಳುವುದಿತ್ತು; ಅವನು ಥಟ್ಟನೆ ಬಗ್ಗಿ ತಲೆ ತಪ್ಪಿಸಿಕೊಂಡ. "ಖದೀಮರೇ" ಹಲ್ಲು ಕಚ್ಚಿ ಸತೀಶ ಪಿಸುಗುಟ್ಟಿಕೊಂಡ. "ನಾವೂ ಒಂದು ಕೈ ತೋರಿಸುತ್ತೇವೆ."ತಾರಸಿ ಮೇಲಿದ್ದ ಮೂರು ಕಂಬಗಳಲ್ಲಿ ಒಂದರ ಹಿಂದಿನಿಂದ ಬಗ್ಗಿದ ಒಬ್ಬನನ್ನು ಸತೀಶ ನೋಡದ. ಅವನು ಅಟ್ಟಹಾಸದ ಕೇಕೆ ಹಾಕಿ "ಏ ಇಲಿಗಳೇ ಹೋಗಿ ನಿಮ್ಮ ಬಿಲಗಳನ್ನು ಸೇರಿಕೊಳ್ಳಿ" ಎಂದು ಆರ್ಭಟಿಸಿದ.

ತಡೆಯಲಾಗದಷ್ಟು ಕೋಪದಿಂದ ಕೆರಳಿದ ಸತೀಶ, ಹಾಗೆಯೆ ಮನೆಗೆ ಅಂಟಿಕೊಂಡೆ ಮುಂದೆ ಮುಂದೆ ತೆವಳಿದ. ಬೆದರು ಬೊಂಬೆಯಂತೆ ಕಾಲುಗಳನ್ನು ಅಗಲ ಮಾಡಿಕೊಂಡು, ಕೈಯಲ್ಲಿ ಬಂದೂಕವನ್ನು ಸಿದ್ಧವಾಗಿಟ್ಟುಕೊಂಡು ದೃಢವಾಗಿ ನಿಂತಿದ್ದ ಆಕೃತಿಯಿಂದ ತನ್ನ ಕಣ್ಣುಗಳನ್ನು ಹಿಂತೆಗೆಯದೆ ಮುಂದುವರೆದ.

ಬೆಳಕು ಸತೀಶನೆಡೆ ತಿರುಗಿತು. ಗೋಡೆಯ ಮೇಲುಗಡೆ ತನ್ನ ಮುಖವನ್ನು ಪೂರಾ ತಗ್ಗಿಸಿ ಹುದುಗಿದ ಸತೀಶನಿಗೆ ಹೃದಯವೆ ಬಾಯಿಗೆ ಬಂದಂತಾಯಿತು. ಅವರೇನಾದರೂ ಅವನನ್ನು ನೋಡಿದರೆ ಅವನಿಗೆ ಸಾವು ಖಂಡಿತ. ಅವನಿಂದ ಮೂರು ಅಡಿ ದೂರಕ್ಕೆ ಬೆಳಕು ಬಂದು ನಂತರ ಬಾಗಿಲಿನ ಕಡೆಗೆ ಹೋಯಿತು. ಸತೀಶ, ಗೋಡೆಯ ಗಾರೆಗಚ್ಚನ್ನು ಹಿಡಿದುಕೊಂಡೆ ಸಾಗಿದ. ಅಲ್ಲೆ ಒಂದು ಇಟ್ಟಿಗೆ ಅಲ್ಲಾಡಿದಂತೆ ಅವನಿಗನ್ನಿಸಿತು. ಇಟ್ಟಿಗೆಯನ್ನು ಅಲ್ಲಾಡಿಸಿ, ಮೆಲ್ಲನೆ ತೆಗೆದು ಕೈಯಲ್ಲಿ ಹಿಡಿದುಕೊಂಡ. ಒಂದು ಕ್ಷಣವೂ ತಡಮಾಡದೆ, ಮಂಡಿಯೂರಿದ ಅವನು ಎದ್ದು, ಗುರಿಯಿಟ್ಟು ತನ್ನ ಎಲ್ಲ ಶಕ್ತಿಯನ್ನೂ ಒಟ್ಟುಗೂಡಿಸಿ, ಕೇವಲ ಹತ್ತು ಗಜದಷ್ಟು ದೂರದಲ್ಲಿ ನಿಂತಿದ್ದ ಬಂದೂಕುಧಾರಿಗೆ ರಭಸದಿಂದೊಗೆದ. ಅವನ ಗುರಿ ತಪ್ಪಲಿಲ್ಲ. ಇಟ್ಟಿಗೆ ಕಲ್ಲು ಅವನನ್ನು ಎಷ್ಟು ವೇಗದಿಂದ ಬಡಿಯಿತೆಂದರೆ ಬಂದೂಕು ಒಂದು ಕಡೆ ಬಿತ್ತು ಅವನೊಂದು ಕಡೆ ಕೆಳಕ್ಕೆ ಬಿದ್ದ. ಮತ್ತೆ ಸತೀಶ ತನ್ನ ಮನೆಯಂಗಳದ ಆಸರೆಗೆ ನೆಗೆಯುವುದರೊಳಗಾಗಿ ಆ ಖದೀಮ ನಿಂತು ಕೂಗಿದ: ''ಅವರನ್ನು ಹಿಡಿದು ಕೊಲ್ಲರಿ.'' ಬಂದೂಕನ್ನು ಹೆಗಲಿಗೆ ಏರಿಸಿ ಮೂರು ಸಲ ಗುಂಡು ಹಾರಿಸಲು ಪ್ರಯತ್ನಿಸಿದ. ಆದರೆ ಬಂದೂಕ ನಿಷ್ಪ್ರಯೋಜಕವಾಯಿತು.

ಸತೀಶನಿಗೆ ತುಂಬ ಖುಷಿಯಾಯಿತು. ನೆಲಕ್ಕೆ ಧುಮುಕಿ, ರಸ್ತೆಯೊಳಗೋಡಿದ. ನೇರ ಓಡಿಹೋಗಿ, ಅಪ್ಪನ ತೋಳುಗಳಲ್ಲಿ ಸೇರಿಕೊಂಡ. ''ನಮಗೆ ಹೆಚ್ಚು ಅವಕಾಶವಿಲ್ಲ'' ಅಪ್ಪ ಹೇಳಿದ: ''ಅವರು ಒಂಬತ್ತು ಜನ ಇದ್ದಾರೆ. ಎಲ್ಲರ ಬಳಿಯೂ ಬಂದೂಕ ಮತ್ತು ದೀಪಗಳು ಇವೆ. ನಮ್ಮಲ್ಲಿ ಏನೂ ಇಲ್ಲ.''

''ನಮ್ಮ ಬಳಿ ಬಂದೂಕು, ಇಲ್ಲದಿದ್ದರೂ ನಾವು ದೀಪದ ಏರ್ಪಾಟು ಮಾಡಿಕೊಳ್ಳಬಹುದು.'' ಎಂದ ಸತೀಶ. ಅವನು ಹಾಗೆಯೆ ತಿರುಗಿದ. ಕಾಂಪೌಂಡ್ ಗೋಡೆಯ ಒಳಭಾಗದತ್ತ ಮೆಲ್ಲನೆ ನಡೆದ. ಅಲ್ಲೇ ಒಂದು ಮೂಲೆಯಲ್ಲಿ ಅವರ ಹಸುವಿನ ಕರು ಹೆದರಿಕೊಂಡು ಕುಳಿತಿತ್ತು. ಸತೀಶ ಅಲ್ಲಿದ್ದ ಕೆಲವು ಒಣಹುಲ್ಲಿನ ಕಂತೆಗಳನ್ನು ಆತುರಾತುರವಾಗಿ ಹರಿದು ತಿರುಚಿ, ಒಂದು ಗುಂಡಗಿನ ದಪ್ಪ ಗಂಟಿನ ಹಾಗೆ ಕಟ್ಟಿದ. ಗಾಬರಿಗೊಂಡ ಕರುವಿನ ಮೈಯನ್ನು ಪ್ರೀತಿಯಿಂದ ಮೆಲ್ಲಗೆ ನೇವರಿಸಿದ. ಅನಂತರ ಅವನು ಜಗ್ಗನೆದ್ದು, ಗಲ್ಲಿಯ ಮೂಲಕ ಹಳ್ಳಿಯವರೆಲ್ಲ ಇನ್ನೂ ಗುಂಪು ಕೂಡಿದ್ದ ಮಂಚಂದರ ಮನೆಯ ಬಾಗಿಲ ಬಳಿ ಬಂದ.

''ಇಟ್ಟಿಗೆಗಳು, ಕಲ್ಲು, ಎಲ್ಲವನ್ನೂ ತುಂಬಾ ತನ್ನಿ. ಹಳ್ಳಿಯನ್ನು ಉಳಿಸಲು ನಾವೇನಾದರೂ ಮಾಡಲೇಬೇಕು'' ಎಂದು ಕಟ್ಟರ್‌ಸಿಂಗ್ ಕೂಗಿದ. ತನ್ನ ಕುಡುಗೋಲನ್ನು ಮುಂದೆ ಒಡ್ಡಿದ.

ಸತೀಶ ಮೆಲ್ಲನೆ ಸಿಂಗನನ್ನು ಮೊಣಕೈಯಿಂದ ತಿವಿದು ಕೇಳಿದ: "ನಿನ್ನ ಬಳಿ ಬೆಂಕಿಪೊಟ್ಟಣ ಇದೆಯಾ ?"

"ಬೆಂಕಿ ಪೊಟ್ಟಣವೇ ?" ಸಿಂಗ್ ಮುಖಗಂಟಿಕ್ಕಿದ. ತನ್ನ ಜೇಬುಗಳನ್ನು ಹುಡುಕಿ ಬೆಂಕಿಪೊಟ್ಟಣವನ್ನು ಸತೀಶನ ಕೈಯಲ್ಲಿರಿಸಿದ. ಅನಂತರ ಅವನು ಕೂಗಿದ: "ಒದ್ದು ಬಾಗಿಲನ್ನು ತೆಗೆಯಿರಿ. ಛಾವಣಿಯ ಮೇಲೆ ಹತ್ತಿ ಬನ್ನಿ. ಏನು ನೀವೆಲ್ಲಾ ಅಂಜುಬುರುಕರಾಗಿದ್ದೀರಾ ?"

"ನಾನು ಕಾದಾಡುತ್ತೇನೆ." ಯಾರದೂ ಧ್ವನಿ.

"ನಾನೂ ಅಷ್ಟೆ." ಜತೆಗೆ ದನಿಗೂಡಿಸಿದ ಸತೀಶನ ಅಪ್ಪ.

"ನಾನೂ ಅಷ್ಟೆ," ಮೆಲ್ಲಗೆ ನುಡಿದ ಸತೀಶ. ಮತ್ತೆ ಅವರ ಮನೆಯಂಗಳದತ್ತ ಜಾರಿಕೊಂಡ. ಮಂಚಂದ ಅವರ ಮನೆ ಕಡೆ ಗೋಡೆಯಲ್ಲಿ ಇದ್ದ ಕಿಂಡಿಯ ಕಡೆ ಧಾವಿಸಿದ. ಒಣ ಹುಲ್ಲಿಗೆ ಕಡ್ಡಿ ಗೀಚಿ ಬೆಂಕಿ ಇಟ್ಟ. ಹುಲ್ಲಿನ ಹಿಡಿ ಒಮ್ಮೆಲೆ ಚಟಪಟನೆ ಶಬ್ದ ಮಾಡಿ ಹೊತ್ತಿಕೊಂಡಿತು. ಕಣ್ಣುಗಳಿಗೆ ಹೊಗೆ ಕವಿಯಿತು. ಅವನು ಕೆಮ್ಮಿದ. ಗೋಡೆಯ ಕಂಡಿಯ ಮೂಲಕ ಜಾಗರೂಕತೆಯಿಂದ ಕತ್ತಲಿನ ಅಂಗಳದತ್ತ ಸೂಕ್ಷ್ಮವಾಗಿ ಇಣಕಿ ನೋಡಿದ. ಹುಡುಕು ದೀಪವನ್ನು ಅವರು ಆರಿಸಿಬಿಟ್ಟಿದ್ದರು. "ಇದೀಗ ಸಮಯ" ಸತೀಶ ಯೋಚಿಸಿದ: "ಈಗ ಇಲ್ಲ ಎಂದರೆ ಎಂದೂ ಇಲ್ಲ."

ಮೆಲ್ಲಗೆ ಮುಂದೆ ಬಂದ. ಉರಿಯುತ್ತಿದ್ದ ಹುಲ್ಲಿನ ಗಂಟನ್ನು ಮಂಚಂದರ ಅಂಗಳದ ಮಧ್ಯಭಾಗಕ್ಕೆ ಬೀಸಿ ಒಗೆದ.

ಸತೀಶ್ ಎಸೆದ ಬೆಂಕಿಚೆಂಡು ಉಲ್ಕೆಯಂತೆ ಹಾರಿಬಿದ್ದು, ಕತ್ತಲಲ್ಲಿ ಬಾಣದಂತೆ ಚಿಮ್ಮಿ ಸುತ್ತಲೆಲ್ಲ ಬೆಳಕು ಹರಡಿತು. ಕಂಭಗಳ, ಮರಗಳ, ಪೆಟ್ಟಿಗೆಗಳ ಹಿಂದೆ ಆಶ್ರಯ ಪಡೆಯಲು ನೆಗೆದ ಡಕಾಯಿತರ ನೆರಳುಗಳು ಎಲ್ಲರಿಗೂ ಕಾಣಿಸಿತು. "ಅವನನ್ನು ಕೊಲ್ಲಿ, ಗುಂಡು ಹಾರಿಸಿ ಅವನ ಮೇಲೆ."

"ಆಹ್ಹಾ!" ಕುರುಚಲುಗಡ್ಡದ ದಪ್ಪನೆಯ ಮನುಷ್ಯನೊಬ್ಬ ಅಂಗಳದಿಂದ ಕೂಗಿದ: "ತಗೊ ಇದನ್ನ" ಬಂದೂಕನ್ನೆತ್ತಿಕೊಂಡ, ಗುರಿಯಿಟ್ಟ.

ಸತೀಶ ಎಡಕ್ಕೆ ಜಿಗಿದು ಅಲ್ಲೆ ಓರಣವಾಗಿ ಜೋಡಿಸಿದ್ದ ಬೆರಣಿಗಳ ಗುಡ್ಡೆಯ ಹಿಂದೆ ಅವಿತುಕೊಂಡ. ಅವನ ಪಕ್ಕೆಗಳು ಸಾವಿರ ಸೂಜಿಗಳಿಂದ ಒಮ್ಮೆಲೇ ಚುಚ್ಚಿದಂತೆ ನೋಯುತ್ತಿದ್ದುವು. ಬೆರಣಿ ರಾಶಿಯ ಮೇಲೆ ಗುಂಡಿನ ಸುರಿಮಳೆ ಆಯಿತು. ನಂತರ ಸ್ತಬ್ಧವಾಯಿತು. "ಬೆಂಕಿಯನ್ನು ದೂರ ಮಾಡಿ," ಒಬ್ಬ ದರೋಡೆಕೋರ ಕೂಗಿದ. "ಅದನ್ನು ತುಳಿದು ಆರಿಸಿ."

"ಓಹ್ಹ್! ಇಲ್ಲ.... ಬೆಂಕಿ ಆರಕೂಡದು," ಯೋಚಿಸಿದ ಸತೀಶ್‌ಕುಮಾರ. "ಅದೇ ನಮ್ಮ ಅತ್ಯುತ್ತಮ ಅಸ್ತ್ರ."

ಅವನು ಸರಸರನೆ ಎದ್ದು ನಿಂತು ಮನೆಯತ್ತ ದೃಷ್ಟಿ ಹರಿಸಿದ. ಕಪ್ಪು ಕುರ್ತ, ಪಾಯಿಜಾಮ ಧರಿಸಿದ್ದ ಒಬ್ಬ ವ್ಯಕ್ತಿ ಕಾರ್ಯನಿರತನಾಗಿದ್ದ. ಅವನು ಮುಂದಿನ ಹೆಜ್ಜೆ ಇಡುವಷ್ಟರಲ್ಲಿ ಅವನ ಹೆಗಲ ಮೇಲೆ ರಭಸದಿಂದ ಒಂದು ಇಟ್ಟಿಗೆ ಬಂದು ಬಿತ್ತು. ಅವನು ಅಲ್ಲೇ ಮುಗ್ಗರಿಸಿ ಕೆಳಗೆ ಬಿದ್ದ.

ಸತೀಶ ಹಿಂದಕ್ಕೆ ತಿರುಗಿ ನೋಡಿದ. ಕಿಶನ್ ಮಾಮ ವಿಜಯ ಶಾಲಿಯಾದವನಂತೆ ಬೇಗಿ ಗೋಡೆಯ ಹಿಂದೆ ಮರೆಯಾದ.

"ಬಡಿಯಿರಿ, ಸದೆ ಬಡಿಯಿರಿ" ತಂದೆಯ ಉತ್ತೇಜಕ ಕೂಗು ಸತೀಶನಿಗೆ ನವಚೈತನ್ಯ ನೀಡಿತು. ಏನಾದರೂ ಆಯುಧ ಸಿಕ್ಕೀತೆ ಎಂದು ಹಾಗೆಯೇ ಕತ್ತಲಲ್ಲಿ ಸುತ್ತಲೂ ನೋಡಿದ. ಮತ್ತೆ ಕೆಲವು ಇಟ್ಟಿಗೆಗಳ ಮೇಲೆ ಅವನ ಕೈ ಸರಿದವು, ಅಷ್ಟೆ. ಒಂದು ಇಟ್ಟಿಗೆಯನ್ನು ಭದ್ರವಾಗಿ ಹಿಡಿದುಕೊಂಡ. ಎಲ್ಲ ಎಚ್ಚರಿಕೆಯನ್ನೂ ಮರೆತು ನೇರ ನೆಟ್ಟಗೆ ನಿಂತು, ಎದ್ದು ನಿಂತಿದ್ದ ಆ ಕಳ್ಳನ ಮೇಲೆ ಅದನ್ನು ಬೀಸಿ ಎಸೆದ. ಅದು ಅವನ ಗಲ್ಲಕ್ಕೆ ಬಡಿಯಿತು. ಈ ಏಟಿಗಂತೂ ಸ್ತಬ್ಧನಾಗಿ ಹೋದ ಆತ ಹಾಗೇ ಹಿಂದಕ್ಕುರುಳಿ ಬಿದ್ದ! ಅವನ ಕೈ ದವಡೆಯತ್ತ ಸರ್ರನೆ ಜಾರಿದಂತೆ, ತನಗಾದ ನೋವಿನಲ್ಲಿ ಅಸಮಾಧಾನದಿಂದ ಗುರ್ರೆಂದ! ಅವನ ಮುಖ ಮೊದಲು ತಿರುಚಿಕೊಂಡು ಆಮೇಲೆ ಹಾಗೆಯೇ ಕೆಂಪಾದ ತಂತಿ ಬಲೆಯಂತೆ ಆಯಿತು! ಅಕ್ಕಪಕ್ಕ ತಿರುಗಿ ನೋಡಿದ. ಗಾಳಿಗೆ ಅಲೆಯಲೆಯಾಗಿ ಉರಿಯುವ ಬೆಂಕಿಯ ಬೆಳಕಿನಲ್ಲಿ ತನ್ನನ್ನು ಬಡಿದವನನ್ನು ಹಾಗೆಯೇ ಉಗ್ರವಾಗಿ ದಿಟ್ಟಿಸಿ ನೋಡಿದ. ಉರಿಯುತ್ತಿದ್ದ ಹುಲ್ಲಿನ ಬೆಳಕಿನಲ್ಲಿ ಅವರಿಬ್ಬರ ಕಣ್ಣುಗಳೂ ಒಂದು ಕ್ಷಣ ಸಂಧಿಸಿದುವು. ಅಬ್ಬಬ್ಬಾ! ಒಬ್ಬ ಮನುಷ್ಯನ ಕಣ್ಣುಗಳಲ್ಲಿ ಅಂಥ ರೋಷ, ಆವೇಷ, ದ್ವೇಷವನ್ನು ತನ್ನ ಇಡೀ ಜೀವನದಲ್ಲೆ ಸತೀಶ ಈವರೆವಿಗೂ ಕಂಡಿರಲಿಲ್ಲ. ಇನ್ನೊಂದು ಇಟ್ಟಿಗೆ ಒಗೆಯಲು ಕೆಳಗೆ ಬಾಗಿದ. ಈ ಬಾರಿಯೂ ಸತೀಶನ ಕೈ ಗುರಿ ತಪ್ಪಲಿಲ್ಲ. ಅವನು ರೋಷದಿಂದ, ರಭಸದಿಂದೆಸೆದ ಇಟ್ಟಿಗೆ ಕಳ್ಳನ ಹಣೆಗೆ ಬಡಿಯಿತು. ಆ ವ್ಯಕ್ತಿ ಎರಡು ಸಲ ಬುಗುರಿಯಂತೆ ತಿರುಗಿ ಧೊಪ್ಪನೆ ಕೆಳಗೆ ಬಿದ್ದ.

ಸತೀಶನ ಕೆಂಪು ಹವಳದ ತುಟಿಗಳಲ್ಲಿ ತಾನಾಗಿಯೇ ಹೊರಹೊಮ್ಮಿತ್ತು, ಸಂತಸದ ಕೂಗು! "ನಾವು ಅವರನ್ನು ಸದೆ ಬಡಿದು ಕೊನೆಮುಟ್ಟಿಸುತ್ತೇವೆ, ನಾವು ಅವರನ್ನು ಮುಗಿಸಿಬಿಡೋಣ!" ಸತೀಶ ಹಿಗ್ಗಿದ. ಮೂರನೆ ಇಟ್ಟಿಗೆ ತೆಗೆದುಕೊಂಡ. ಈ ಬಾರಿ ಎತ್ತಿನ ಗಾಡಿ ಹಿಂದೆ ಅಡಗಿಕೊಂಡಿದ್ದ ಡಕಾಯಿತನಿಗೆ ಬಡಿಯಲು ಗುರಿಯಿಟ್ಟ. ಉರಿಯುತ್ತಿದ್ದ ಬೆಂಕಿಯ ಜ್ವಾಲೆ, ಸತೀಶ ಅವಿತುಕೊಂಡ ಜಾಗವನ್ನು ಪ್ರಕಾಶಪಡಿಸಿತು.

ಸತೀಶ ಸುತ್ತಮುತ್ತ ನೆಗೆದು, ಗುರಿಯಿಟ್ಟಂತೆಯೆ, ಎಲ್ಲಿಂದಲೋ ಹಾರಿ ಬಂದ ಗುಂಡೊಂದು ಸತೀಶನ ಮುಖದ ಬಲಪಾರ್ಶ್ವಕ್ಕೆ ಬಡಿಯಿತು ಇಟ್ಟಿಗೆಯನ್ನು ಭದ್ರವಾಗಿ ಹಿಡಿದುಕೊಂಡೇ ಸತೀಶ ಮಾತಿಲ್ಲದೆ ನೆಲಕ್ಕೆ ಹಾಗೇ ಕುಸಿದ.

"ಮಗೂ ಸತೀಶ್..... ಸತೀಶ್." ಸತೀಶ್‌ಕುಮಾರನಿಗೆ ಅವನ ತಂದೆಯ ದುಃಖದ ಕೂಗು ಕೇಳಿಸಲಿಲ್ಲ. ಎಲ್ಲಾ ಕಡೆಗಳಿಂದ ಮಂಚಂದರ ಮನೆಯ ಅಂಗಳಕ್ಕೆ ನುಗ್ಗಿದ ಗ್ರಾಮಸ್ಥರ ಕೂಗು ಗದ್ದಲ ಸಹ ಅವನಿಗೆ ಕೇಳಿಸಲಿಲ್ಲ. ಅವನಣ್ಣ ವಿನೋದ್ ರೂಮಿನೊಳಗೆ ತನ್ನನ್ನು ದರದರನೆ ಎಳೆದುಕೊಂಡು ಹೋದದ್ದು, ನಂತರ ಅವನು ತನ್ನನ್ನು ಬಗ್ಗಿ ದುರುಗುಟ್ಟಿ ನೋಡಿದ್ದು ಮಾತ್ರ

ಅಲ್ಪಸ್ವಲ್ಪ ನೆನಪಿನಲ್ಲಿತ್ತು. ಆ ನಂತರ ಯಾವುದರ ಅರಿವೂ ಅವನಿಗಿರಲಿಲ್ಲ.

ಮಂಚೆಂದರ ಮನೆಯಂಗಳದಲ್ಲಿ ಹಳ್ಳಿಯವರು ಡಕಾಯಿತರೊಡನೆ ಇಟ್ಟಿಗೆ, ಕಲ್ಲು, ಕೋಲುಗಳೊಡನೆ ನಡೆಸಿದ ಭೀಕರ ಕದನದ ಬಗ್ಗೆ ಸತೀಶನಿಗೇನೂ ಅರಿವಿರಲಿಲ್ಲ. ಅವರುಗಳು ತಮ್ಮ ಮತ್ತು ತಮ್ಮ ಕುಟುಂಬದವರ ಪ್ರಾಣರಕ್ಷಣೆಗಾಗಿ ಕುಡುಗೋಲು ಮತ್ತು ಕೈಮುಷ್ಟಿಗಳಿಂದ ಎರಡು ತಾಸುಗಳಿಗೂ ಹೆಚ್ಚಾಗಿ ಹೋರಾಡಿದರು. ಡಕಾಯಿತರ ನಾಯಕ ಸಿಕ್ಕಿ ಬೀಳುವತನಕವೂ ಎಡೆಬಿಡದೆ ಅವರು ತೀವ್ರವಾಗಿ ಕಾದಾಡಿದರು. ಅವನನ್ನು ಬೆಳಗಾಗುವರೆಗೆ ಹಗ್ಗದಿಂದ ಕಟ್ಟಿ ಹಾಕಿದ್ದರು. ಬೆಳಗಾದ ನಂತರ ಪೊಲೀಸರು ಬಂದು ಡಕಾಯಿತರ ಮುಖ್ಯಸ್ಥನನ್ನು ಹಾಗೂ ಅವನ ಸಂಗಡಿಗರನ್ನೂ ಬಂಧಿಸಿ, ಒಯ್ದ ಆ ಕ್ಷಣಗಳನ್ನು ಯಾರೂ ಮರೆಯಲಾರರು.

ರಾಮನಗರದ ಈ ಧೀರ ಕಿಶೋರ ತನ್ನ ಬಲಗಣ್ಣನ್ನು ಕಳೆದುಕೊಂಡು ಒಂಬತ್ತು ಜನ ದರೋಡೆಕೋರರಿಂದ ಇಡೀ ಗ್ರಾಮವನ್ನೇ ಪಾರುಮಾಡಿದುದನ್ನೂ ಸಹ ಯಾರೂ ಮರೆಯಲಾರರು.



**ಸಯಲ್ ಲಹ್ನುಭಾಯ್ ಭೋಯ** 1967ರ ಜೂನ್ 1ರಂದು ಗುಜರಾತಿನಲ್ಲಿ ಜನಿಸಿ ಪ್ರಾಥಮಿಕ ಶಾಲೆಯಲ್ಲಿ ಕಲಿತಳು. ಅವಳು ಗುಜರಾತಿ ಮಾತನಾಡುತ್ತಾಳೆ. ಅವಳಿಗೆ ಇಬ್ಬರು ಸೋದರರು ಮತ್ತು ಒಬ್ಬ ಸೋದರಿ ಇದ್ದಾರೆ. ಅವಳ ತಂದೆ ಕೂಲಿ ಕೆಲಸ ಮಾಡುತ್ತಾರೆ. ಸಂಗೀತ, ಓದು ಮತ್ತು ಆಟಗಳಲ್ಲಿ ಅವಳಿಗೆ ಹೆಚ್ಚಿನ ಆಸಕ್ತಿ.



**ಸಿ. ಗೋವಿಂದನ್** 1966ರ ಏಪ್ರಿಲ್ 15ರಂದು ತಮಿಳು ನಾಡಿನಲ್ಲಿ ಜನಿಸಿ ಕುರುಬರಪಲ್ಲಿ ಹೈಸ್ಕೂಲಿನಲ್ಲಿ ಓದಿದ. ಅವನು ತಮಿಳು ಮತ್ತು ಇಂಗ್ಲೀಷಿನಲ್ಲಿ ಮಾತನಾಡಬಲ್ಲ. ಅವನಿಗೆ ಆರು ಜನ ಅಣ್ಣತಮ್ಮಂದಿರು ಮತ್ತು ಇಬ್ಬರು ಅಕ್ಕತಂಗಿಯರಿದ್ದಾರೆ. ಅವರ ತಂದೆ ಕೂಲಿ ಕೆಲಸ ಮಾಡುತ್ತಾರೆ. ಓದುವುದು, ಸಂಗೀತ ಮತ್ತು ಆಟಗಳು ಅವನಿಗೆ ಪ್ರಿಯ.



**ಸೋನಿಯಾ ಸಿನ್ಹಾ** 1969ರ ನವೆಂಬರ್ 3 ರಂದು ಬಿಹಾರದಲ್ಲಿ ಜನಿಸಿದಳು. ಪಾಟ್ನಾದ ಸೇಂಟ್ ಜೋಸೆಫ್ಸ್ ಕಾನ್ವೆಂಟಿನಲ್ಲಿ ಓದಿದಳು. ಹಿಂದೀ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಮಾತನಾಡಬಲ್ಲಳು. ಮಕ್ಕಳ ಚಿಕಿತ್ಸಾ ತಜ್ಞರಾಗಿದ್ದ ಅವರ ತಂದೆಯನ್ನು ಈ ಪುಸ್ತಕದಲ್ಲಿ ವಿವರಿಸಿರುವಂತ ಬಂಕಿ ದುರಂತದಲ್ಲಿ ಕಳೆದುಕೊಂಡಳು. ಪುಸ್ತಕಗಳನ್ನು ಓದುವ ಅಭಿರುಚಿ ಇರುವ ಅವಳಿಗೆ ಆಟಗಳಲ್ಲೂ ಆಸಕ್ತಿ ಇದೆ.

**ಶತ್ರುಘ್ನ ಲಾಲ್ ಸಾಹು** 1966ರ ಡಿಸೆಂಬರ್ 16 ರಂದು ಮಧ್ಯ ಪ್ರದೇಶದಲ್ಲಿ ಜನಿಸಿ ದುರ್ಗ್‌ನಲ್ಲಿ ನೆಹರೂ ಪ್ರಾಥಮಿಕ ಶಾಲೆಯಲ್ಲಿ ಓದಿದ. ಅವನು ಚತ್ತೀಸ್‌ಘಢಿ ಮತ್ತು ಹಿಂದೀ ಭಾಷೆಗಳಲ್ಲಿ ಮಾತನಾಡಬಲ್ಲ. ಅವನ ತಾಯಿತಂದೆಯರು ನಿಧನರಾದ ಮೇಲೆ ಜಿಲ್ಲಾ ಸಾಹು ಸಂಘ ಅವನ ಜವಾಬ್ದಾರಿ ವಹಿಸಿಕೊಂಡಿತು. ಜಾನಪದ ಕಾರ್ಯಕ್ರಮ, ಆಟ, ಸಾಹಸಮಯ ಕಥೆಗಳನ್ನು ಓದುವುದು ಅವನಿಗೆ ಪ್ರಿಯವಾದವು. ಇಂಜಿನೀಯರ್ ಆಗುವ ಆಸೆ ಅವನಿಗಿದೆ.





**ಫೆಲಿಸಿಟಸ್ ಸೊರೆಂಗ್** ಒರಿಸ್ಸಾದಲ್ಲಿ 1950ರ ಜೂನ್ 21 ರಂದು ಜನಿಸಿದಳು. ಮೆಟ್ರಿಕ್ಯುಲೇಷನ್ ಪರೀಕ್ಷೆಯ ನಂತರ ರೌರ್ಕೆಲಾ ಸರ್ಕಾರಿ ಆಸ್ಪತ್ರೆಯಲ್ಲಿ ನರ್ಸ್ ತರಬೇತಿ ಪಡೆದಳು. ಒರಿಯಾ, ಹಿಂದೀ, ಇಂಗ್ಲೀಷ್ ಭಾಷೆಗಳು ಅವಳಿಗೆ ಬರುತ್ತವೆ. ಅವಳಿಗೆ ಇಬ್ಬರು ಸೋದರರು ಐದು ಜನ ಸೋದರಿಯರು ಇದ್ದಾರೆ. ಅವರ ತಂದೆ ಕೃಷಿಕರು. ಕರಕುಶಲ ಮತ್ತು ಸಂಗೀತ ಅವಳ ಹವ್ಯಾಸ.

**ಸತೀಶ್ ಕುಮಾರ್ ಫೂಲ್‌ಸಿಂಗ್** ಉತ್ತರ ಪ್ರದೇಶದಲ್ಲಿ 1968ರಲ್ಲಿ ಜನಿಸಿದ. ಅವನು ಶಾಲೆಗೆ ಸೇರಲಿಲ್ಲ. ಇತರರ ದನಕರುಗಳನ್ನು ನೋಡಿಕೊಳ್ಳುವುದರ ಮೂಲಕ ಹಣ ಸಂಪಾದಿಸಿ ಮನೆಗೆ ನೆರವಾದ. ಅವನು ಹಿಂದೀ ಭಾಷೆಯಲ್ಲಿ ಮಾತನಾಡುತ್ತಾನೆ. ಅವನಿಗೆ ಇಬ್ಬರು ಅಣ್ಣಂದಿರು ಮತ್ತು ಒಬ್ಬಳು ತಂಗಿ ಇದ್ದಾರೆ. ಅವರ ತಂದೆ ಕೂಲಿ ಕೆಲಸ ಮಾಡುತ್ತಾರೆ.



